ಸಾಹಿತ್ಯವಾಹಿನಿ–೬೩

# ವೇದಾಂತ ಸೂತ್ರಗಳು

ಜಿ. ಹನುಮಂತರಾವ್

ಪ್ರಕಾಶಕರು

ಡಿ. ವಿ. ಕೆ. ಮೂರ್ತಿ

ಕೃಷ್ಣಮೂರ್ತಿಪುರಂ : : ಮೈಸೂರು-೪

ಸಾಹಿತ್ಯಪ್ರಕಾಶನ–೪

# ವೇದಾಂತ ಸೂತ್ರಗಳು

ಜಿ. ಹನುಮಂತರಾವ್

ಪ್ರಕಾಶಕರು
ಡಿ. ವಿ. ಕೆ. ಮೂರ್ತಿ
ಕೃಷ್ಣಮೂರ್ತಿಪುರಂ : : ಮೈಸೂರು–೪

# ವೇದಾಂತಸೂತ್ರಗಳು

## ೧. ಪೀಠಿಕೆ

ವೇದದ ಪೂರ್ವಭಾಗಗಳ ಆಧಾರದ ಮೇಲೆ, ಮುಖ್ಯವಾಗಿ ಬ್ರಾಹ್ಮಣಗಳ ಆಧಾರದ ಮೇಲೆ, ರಚಿಸಿದ ಸೂತ್ರಗಳು ಪೂರ್ವ ಮೀಮಾಂಸಾ ದರ್ಶನ ಸೂತ್ರಗಳು. ವೇದದ ಕೊನೆಯಭಾಗ ಗಳಾದ ಉಪನಿಷತ್ತುಗಳ ತತ್ತ್ವವನ್ನೊಳಗೊಂಡ ಸೂತ್ರಗಳು ಉತ್ತರಮೀಮಾಂಸಾದರ್ಶನ ಸೂತ್ರಗಳು. ಈ ಎರಡೂ ಸೇರಿ ವೇದದ ಸಮಸ್ತ ತತ್ತ್ವವನ್ನು ಒಳಗೊಂಡಿವೆ. ಆದ್ದರಿಂದ ವೈದಿಕ ದರ್ಶನಗಳಲ್ಲಿ ಇವು ಪರಮ ವೈದಿಕ ದರ್ಶನಗಳಾಗಿ ಪರಿಗಣಿಸ ಲಾಗಿವೆ. ಉತ್ತರ ಮೀಮಾಂಸಾದರ್ಶನ ವೇದದ ಕೊನೆಯ ಭಾಗ ಗಳ ತತ್ತ್ವವಾದ್ದರಿಂದ ಅದನ್ನು ವೇದಾಂತವೆಂದು ಕರೆಯುವುದು ರೂಢಿಯಲ್ಲಿದೆ. ವೇದಾಂತದ ಮೂಲ ತತ್ತ್ವ ಬ್ರಹ್ಮನ್. ಆದ್ದರಿಂದ ಆ ತತ್ತ್ವವನ್ನು ತಿಳಿಸುವ ವೇದಾಂತ ಸೂತ್ರಗಳನ್ನು ಬ್ರಹ್ಮ ಸೂತ್ರಗಳೆಂದೂ ಅದು ಸಶರೀರಿಯಾದ ಜೀವರುಗಳ ಮೋಕ್ಷ ಮಾರ್ಗವನ್ನು ತಿಳಿಸುತ್ತಾದ್ದರಿಂದ ಅದನ್ನು ಶಾರೀರಕ ಸೂತ್ರ ಗಳೆಂದೂ, ಸಂನ್ಯಾಸಿಗಳಿಗೆ ಇವು ಅಗತ್ಯವಾದ್ದರಿಂದ ಭಿಕ್ಷು ಸೂತ್ರ ಗಳೆಂದೂ ಕರೆಯುವುದು ಉಂಟು. ತತ್ತ್ವ ದೃಷ್ಟಿಯಿಂದ ವೇದಾಂತ ಅಮೂಲ್ಯವಾಗಿರುವಂತೆಯೇ ಅದು ಮತ ದೃಷ್ಟಿಯಿಂದಲೂ ಭಾರತದಲ್ಲಿ ವಿಶೇಷ ಮನ್ನಣೆ ಪಡೆದಿದೆ. ಈಗ ತುಂಬ ಪ್ರಚಾರ ದಲ್ಲಿರುವ ಶೈವ ವೈಷ್ಣವ ಮತಗಳೆರಡೂ ಅದನ್ನು ಆದರಿಸಿವೆ.

ಉಪನಿಷತ್ತುಗಳಲ್ಲಿ ಯಾವುದೊಂದು ಉಪನಿಷತ್ತೂ ಬ್ರಹ್ಮದ

ವಿಚಾರವಾಗಿ ಆಗಲಿ, ಆತ್ಮದ ವಿಚಾರವಾಗಿ ಆಗಲಿ, ಮೋಕ್ಷದ ವಿಚಾರವಾಗಿ ಆಗಲಿ ಅವುಗಳ ಎಲ್ಲ ಮುಖಗಳನ್ನೂ ಸಂಪೂರ್ಣವಾಗಿ ತೋರಿಸುವುದಿಲ್ಲ. ಅಲ್ಲದೆ ಯಾವುದೊಂದು ಉಪನಿಷತ್ತಿನ ತತ್ತ್ವವೂ ಈ ದರ್ಶನದಲ್ಲಿರುವಂತೆ ವ್ಯವಸ್ಥಿತವಾಗಿ ಪ್ರತಿಪಾದನೆಯಾಗಿರುವುದಿಲ್ಲ. ಸಕಲ ಉಪನಿಷತ್ತುಗಳ ಸರ್ವತೋಮುಖವಾದ ತತ್ತ್ವವನ್ನು ಒಂದೇ ಕಡೆಯಲ್ಲಿ ಸೇರಿಸಿ ಅದನ್ನು ದರ್ಶನದ ರೀತಿಯಲ್ಲಿ ಸುವ್ಯವಸ್ಥಿತವಾಗಿ ಸಕ್ರಮವಾಗಿ ತಿಳಿಸುವ ಕಾರ್ಯವನ್ನು ಬಾದರಾಯಣರು ಮೊಟ್ಟಮೊದಲಿಗೆ ಕೈಕೊಂಡರು. ಶಂಕರಾಚಾರ್ಯರು ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ (೧. ೧. ೩.) ಹೇಳಿರುವಂತೆ ಬೇರೆ ಬೇರೆ ಉಪನಿಷತ್ತುಗಳ ವೇದ ವಾಕ್ಯಗಳೆಂಬ ಕುಸುಮಗಳನ್ನು ಆರಿಸಿ ಒಂದು ಕ್ರಮವನ್ನು ಅನುಸರಿಸಿ ಅವಗಳನ್ನು ಕಟ್ಟಿ ಬಾದರಾಯಣರು ಒಂದು ಮಹಾ ಮಾಲೆಯಾಗಿ ನಿರ್ಮಿಸಿರುತ್ತಾರೆ.

## ೨. ಕರ್ತೃ ಮತ್ತು ಕಾಲ

ಈ ಸೂತ್ರಗಳ ಕರ್ತೃ ಬಾದರಾಯಣರು. ಈ ಹೆಸರು ಉತ್ತಮ ಪುರುಷದಲ್ಲಿ ಪ್ರಯೋಗಿಸದೆ ಪ್ರಥಮ ಪುರುಷದಲ್ಲಿ ಉಪಯೋಗಿಸಿರುವುದರಿಂದ ಬಾದರಾಯಣರು ಈ ಸೂತ್ರಗಳ ಕರ್ತೃವಾಗಿರಲಾರರೆಂದು ಕೆಲವು ಪಾಶ್ಚಾತ್ಯ ಪಂಡಿತರು ಅಭಿಪ್ರಾಯ ಪಟ್ಟಿರುತ್ತಾರೆ. ಆ ಪ್ರಯೋಗ ಭಾರತ ಗ್ರಂಥಗಳಲ್ಲಿ ಸಾಧಾರಣವಾಗಿರುವುದರಿಂದ ಬಾದರಾಯಣರು ಈ ಸೂತ್ರಗಳ ಕರ್ತೃ ಎಂಬ ವಿಚಾರದಲ್ಲಿ ಸಂಶಯಕ್ಕೆ ಅವಕಾಶವಿಲ್ಲ. ಸಾಂಪ್ರದಾಯಿಕವಾಗಿ ರಾಮಾನುಜಾಚಾರ್ಯ ಮಧ್ವಾಚಾರ್ಯ

ಮುಂತಾದ ಭಾಷ್ಯಕಾರರು ಬಾದರಾಯಣರೂ ಮತ್ತು ವ್ಯಾಸರೂ ಒಬ್ಬರೇ ಎಂದು ಭಾವಿಸಿರುತ್ತಾರೆ. ಜೈಮಿನಿಯು ವ್ಯಾಸರ ಶಿಷ್ಯ. ಬಾದರಾಯಣರು ಜೈಮಿನಿಯ ಸೂತ್ರಗಳನ್ನು ಉದಹರಿಸಿರುತ್ತಾರಾದ್ದರಿಂದ, ಗುರು ಶಿಷ್ಯನ ವಾಕ್ಯಗಳನ್ನು ಉದಾಹರಿಸುವುದು ಅಸಂಭವವಾದ್ದರಿಂದ ಬಾದರಾಯಣರೂ ವ್ಯಾಸರೂ ಒಬ್ಬರೇ ಆಗಿರಲಾರರೆಂದು ಕೆಲವರ ವಾದ. ಶಬರ, ಗೋವಿಂದಾನಂದ ಮತ್ತು ಆನಂದಗಿರಿ, ಈ ಮೂವರೂ ಗುರು ಶಿಷ್ಯನ ವಾಕ್ಯವನ್ನು ಉದ್ಧರಿಸಿರುವುದು ಸಂಭಾವ್ಯವೆಂದು ಹೇಳಿರುತ್ತಾರೆ.

ವೇದಾಂತ ಸೂತ್ರಗಳು ಬೌದ್ಧರ ಮತ್ತು ಜೈನರ ತತ್ತ್ವವನ್ನು ವಿಮರ್ಶಿಸಿವೆಯಾದುದರಿಂದ ಅವು ಕ್ರಿ. ಪೂ. ೫೦೦ ಕ್ಕಿಂತ ಹಿಂದಿನವಾಗಿರಲಾರವು. ವೇದಾಂತಸೂತ್ರಗಳು ಹೆಸರಿಸಿರುವ ಔಡುಲೋಮಿಯನ್ನು ಪಾಣಿನಿಯ ಸೂತ್ರಗಳೂ ಹೆಸರಿಸಿರುತ್ತವೆಯಾದುದರಿಂದ ವೇದಾಂತ ಸೂತ್ರಗಳು ಕ್ರಿ. ಪೂ. ೨೦೦ಕ್ಕಿಂತ ಈಚಿನವಾಗಿರಲಾರವು. ಅವು ಕ್ರಿ. ಪೂ. ೫೦೦ ರಿಂದ ಕ್ರಿ. ಪೂ. ೨೦೦ರ ಮಧ್ಯೆ ರಚಿತರಾಗಿರಬೇಕೆಂಬುದು ಭಾರತೀಯ ವಿದ್ವಾಂಸರ ಅಭಿಪ್ರಾಯ.

## ೩. ವೇದಾಂತ ಸೂತ್ರಗಳೂ ಮತ್ತು ಇತರ ದರ್ಶನಗಳು

ಬಾದರಾಯಣರು ಜೈಮಿನಿಯ ಅಭಿಪ್ರಾಯಗಳನ್ನು ಮೊದಲನೆಯ ಅಧ್ಯಾಯದ ಐದು ಸೂತ್ರಗಳಲ್ಲೂ, ಮೂರನೆಯ ಅಧ್ಯಾಯದ ಮೂರು ಸೂತ್ರಗಳಲ್ಲೂ, ನಾಲ್ಕನೆಯ ಅಧ್ಯಾಯದ ಮೂರು ಸೂತ್ರಗಳಲ್ಲೂ ವಿಚಾರಮಾಡಿರುತ್ತಾರೆ. ಈ ಇಬ್ಬರ ದರ್ಶನಗಳ ಸಂಬಂಧವನ್ನು ಕುರಿತು ವ್ಯಾಖ್ಯಾನಕಾರರಲ್ಲಿ ಭಿನ್ನಾಭಿಪ್ರಾಯ

ವಿದೆ. ರಾಮಾನುಜರು ಮೀಮಾಂಸಾ ದರ್ಶನಗಳು ಮೊದಲಲ್ಲಿ ಒಂದೇ ಗ್ರಂಥದ ಎರಡು ಭಾಗಗಳಾಗಿದ್ದುವೆಂದು ಹೇಳಿರುತ್ತಾರೆ. ಶಂಕರಾಚಾರ್ಯರ ಅಭಿಪ್ರಾಯ ಅದಕ್ಕೆ ವಿರುದ್ಧವಾಗಿದೆ, ಸಾಂಖ್ಯ ದರ್ಶನವನ್ನು ವಿಮರ್ಶಿಸಲು ಬಾದರಾಯಣರು ತಮ್ಮ ಸೂತ್ರಗಳಲ್ಲಿ ಹೆಚ್ಚು ಭಾಗವನ್ನು ಮೀಸಲಾಗಿಟ್ಟಿರುತ್ತಾರೆ. ಸಾಂಖ್ಯ ದರ್ಶನವನ್ನ ವೇದಾಂತಕ್ಕೆ ಪ್ರಬಲ ಪ್ರತಿಸ್ಪರ್ಧಿಯಾಗಿ ಅವರು ಭಾವಿಸಿರುವುದೇ ಇದಕ್ಕೆ ಕಾರಣ. ಈ ಪ್ರಬಲ ಪ್ರತಿಕಕ್ಷಿಯನ್ನು ದುರ್ಬಲಗೊಳಿಸಿದರೆ ಇತರ ದರ್ಶನಗಳೂ ದುರ್ಬಲಗೊಳ್ಳುತ್ತವೆ ಎಂಬುದು ಅವರ ಭಾವನೆ. ಅವರು ವೈಶೇಷಿಕ ತತ್ತ್ವವನ್ನೂ ಖಂಡಿಸಿರುತ್ತಾರಾದರೂ ಆಗ್ಗೆ ಬಹುಶಃ ಆ ದರ್ಶನ ಸಾಂಖ್ಯದಷ್ಟು ಪ್ರಬಲವಾಗಿರಲಿಲ್ಲವೆಂದು ತೋರುತ್ತದೆ. ಅವರು ಖಂಡಿಸಿರುವ ಇತರ ದರ್ಶನಗಳು ಜೈನ, ಬೌದ್ಧ ಮತ್ತು ಲೋಕಾಯತ ದರ್ಶನ ಗಳು. ಮತ ವಿಚಾರದಲ್ಲಿ ಭಗವದ್ಗೀತೆಯ ಭಾಗವತ ಪಂಥವನ್ನು ಮೆಚ್ಚಿಕೊಂಡಿರುವಂತೆ ತೋರುತ್ತದೆ. ಆದ್ದರಿಂದ ವೇದಾಂತ ಸೂತ್ರಗಳ ಮೇಲೆ ಭಾಷ್ಯ ಬರೆದಿರುವ ತ್ರಿಮತಾಚಾರ್ಯರೂ ಭಗವದ್ಗೀತೆಯನ್ನು ಪ್ರಸ್ಥಾನ ತ್ರಯಗಳಲ್ಲಿ ಒಂದಾಗಿ ಸೇರಿ ಸಿರುತ್ತಾರೆ.

## ೪. ಬ್ರಹ್ಮಸೂತ್ರಗಳು ಮತ್ತು ಉಪನಿಷತ್ತುಗಳು

ಬ್ರಹ್ಮದ ವಿಚಾರವಾಗಿಯೇ ಆಗಲಿ, ಆತ್ಮದ ವಿಚಾರವಾಗಿಯೇ ಆಗಲಿ, ಅವೆರಡರ ಸಂಬಂಧದ ವಿಚಾರದಲ್ಲೇ ಆಗಲಿ, ಮೋಕ್ಷದ ವಿಚಾರವಾಗಿಯೇ ಆಗಲಿ, ಎಲ್ಲ ಉಪನಿಷತ್ತುಗಳ ನಿಲುವು ಒಂದೇ ಅಲ್ಲ. ಕೆಲವು ಉಪನಿಷತ್ತುಗಳು ನಿರ್ಗುಣ ಬ್ರಹ್ಮಕ್ಕೂ, ಬ್ರಹ್ಮ

ಆತ್ಮ ಏಕತೆಗೂ, ಜ್ಞಾನಮಾರ್ಗಕ್ಕೂ ಹೆಚ್ಚು ಪ್ರಾಶಸ್ತ್ಯಕೊಟ್ಟಿರುತ್ತವೆ. ಇನ್ನು ಕೆಲವು ನಿರ್ಗುಣ ಬ್ರಹ್ಮಕ್ಕೂ ಸಗುಣ ಬ್ರಹ್ಮಕ್ಕೂ, ಎರಡಕ್ಕೂ ಪ್ರಾಶಸ್ತ್ಯ ಕೊಟ್ಟಿವೆ; ಜ್ಞಾನಕ್ಕೂ ಕರ್ಮಕ್ಕೂ ಎರಡಕ್ಕೂ ಪ್ರಾಶಸ್ತ್ಯ ಕೊಟ್ಟಿವೆ. ಶ್ವೇತಾಶ್ವತರ ಉಪನಿಷತ್ತು ಜ್ಞಾನದಂತೆ ಭಕ್ತಿಗೂ ಪ್ರಾಶಸ್ತ್ಯಕೊಟ್ಟಿದೆ. ಆದ್ದರಿಂದ ಬಾದರಾಯಣರು ಪಕ್ಷಪಾತವಿಲ್ಲದೆ ಬಹುಮುಖವಾದ ಉಪನಿಷತ್ತುಗಳಲ್ಲಿ ಯಾವುದನ್ನೂ ಬಿಡದೆ ಆತ್ಮತತ್ತ್ವದ ಎಲ್ಲ ಪಾರ್ಶ್ವಗಳನೂ ತೋರಿಸಲು ಪ್ರಯತ್ನಪಟ್ಟಿರುತ್ತಾರೆ. ಆದ್ದರಿಂದ ಉಪನಿಷತ್ತುಗಳ ತತ್ತ್ವ ಭೇದಗಳಿಂದ ಕೂಡಿದ ಏಕತೆಯೆಂದು ಭಾವಿಸಿ ಹೆಚ್ಚು ಕಡಿಮೆ ಎಲ್ಲ ಉಪನಿಷತ್ತುಗಳಿಂದ ಆಯ್ದ ವಾಕ್ಯಗಳನ್ನು ಉದಾಹರಿಸಿರುತ್ತಾರೆ. ಅವುಗಳಲ್ಲಿ ಛಾಂದೋಗ್ಯದವು ಹನ್ನೆರಡು, ಬೃಹದಾರಣ್ಯಕದವು ನಾಲ್ಕು, ಕಠದವು ಎರಡು, ತೈತ್ತಿರೀಯದವು ಎರಡು, ಕೌಷೀತಕೀಯದವು ಎರಡು, ಮುಂಡಕದವು ಮೂರು. ಪ್ರಶ್ನದ್ದು ಒಂದು, ಶ್ವೇತಾಶ್ವತರದ್ದು ಒಂದು, ಜಾಬಾಲದ್ದು ಒಂದು.

ಬಾದರಾಯಣರಿಗೆ ಉಪನಿಷತ್ತುಗಳ ತತ್ತ್ವದ ವಿಚಾರವಾಗಿ ಭಿನ್ನ ಮತಗಳಿದ್ದುವೆಂದು ತಿಳಿದಿತ್ತು. ಭಿನ್ನಾಭಿಪ್ರಾಯ ಪಡೆದಿದ್ದ ಪೂರ್ವಾಚಾರ್ಯರನ್ನು ತಮ್ಮ ಸೂತ್ರಗಳಲ್ಲಿ ಹೆಸರಿಸಿ ಅವರ ಭಿನ್ನಾಭಿಪ್ರಾಯಗಳನ್ನು ಅನುವಾದಮಾಡಿರುತ್ತಾರೆ. ಆದರೆ ಅವುಗಳಲ್ಲಿ ಒಂದು ಮಾತ್ರ ಸಾಧು ಉಳಿದವು ಅಸಾಧು ಎಂದು ಹೇಳಿರುವುದಿಲ್ಲ. ಜೀವ ಬ್ರಹ್ಮ ಸಂಬಂಧ ವಿಚಾರದಲ್ಲಿ ಆಶ್ಮರಥ್ಯನು ಜೀವ ಬ್ರಹ್ಮದ ಭೇದವನ್ನು ಒತ್ತಿ ಹೇಳಿರುತ್ತಾನೆ. ಮೋಕ್ಷ ಪಡೆಯುವವರೆಗೆ ಜೀವ ಬ್ರಹ್ಮದಿಂದ ಭಿನ್ನ; ಮೋಕ್ಷಪಡೆದಾಗ

2

ಅಭಿನ್ನ: ಗಾಢನಿದ್ರೆ (ಸುಷುಪ್ತಿ) ಯಲ್ಲಿ ತಾತ್ಕಾಲಿಕವಾಗಿ ಜೀವ ಬ್ರಹ್ಮರು ಅಭಿನ್ನ ಎಂದು ಔಡುಲೋಮಿ ಹೇಳುತ್ತಾನೆ. ಕಾಶಕೃತ್ಸ್ನನು ಅಭೇದವಾದಿ. ಈ ಮೂರು ವಾದಗಳಿಗೂ ಅನುಕೂಲವಾದ ಉಪನಿಷದ್ವಾಕ್ಯಗಳಿವೆ. ವೇದಮಾತೆ ಋಷಿಗಳಾದ ತನ್ನ ಮಕ್ಕಳಿಗೆ ಬ್ರಹ್ಮತತ್ತ್ವದ ಬಹುಮುಖಗಳನ್ನು ತೋರಿಸಿರುತ್ತಾಳೆ. ಎಲ್ಲ ಮುಖಗಳೂ ಆಗತ್ಯವೇ, ಅವುಗಳ ಸಮನ್ವಯವು ಕೊನೆಯ ಉಪನಿಷತ್ತುಗಳಲ್ಲಿ, ಉದಾಹರಣೆಗೆ, ಪ್ರಶ್ನದ ೧.೨ ರಲ್ಲಿ ಸೂಚಿತವಾಗಿದೆ. ಬಾದರಾಯಣರದು ಸಮನ್ವಯ ದೃಷ್ಟಿ. ಬಾದರಾಯಣ ಸೂತ್ರಗಳೆಲ್ಲ ಒಂದೇ ಪಕ್ಷವನ್ನು ಸಮರ್ಥಿಸುವ ಉದ್ದೇಶದಿಂದ ರಚಿತವಾದುವು ಎಂದು ಭಾವಿಸಿದರೆ ಅವುಗಳನ್ನು ಅರ್ಥ ಮಾಡಿಕೊಳ್ಳುವುದು ಕ್ಲೇಶಕರವಾಗುತ್ತದೆ. ಉಪನಿಷತ್ತುಗಳಂತೆ ವೇದಾಂತ ಸೂತ್ರಗಳೂ ಸಾವಿರಾರು ವರ್ಷಗಳಿಂದ ಒಂದೇ ಸಮನಾಗಿ ಸರ್ವರಿಗೂ ಸ್ಫೂರ್ತಿದಾಯಕವಾಗಿರುವುದು ಅವು ಪಕ್ಷಪಾತದಿಂದ ಕೂಡಿದ ಒಮ್ಮುಖದ ತತ್ತ್ವವಿಲ್ಲದಿರುವುದರಿಂದ. ಸೂತ್ರಗಳ ಸಂಗ್ರಹ ಪರಿಚಯದಿಂದ ಇದು ಸ್ಪಷ್ಟವಾಗುತ್ತದೆ. ಇಲ್ಲಿ ಹೆಚ್ಚು ವಿವರಣೆಗೆ ಅವಕಾಶವಿಲ್ಲ.

## ೫. ವೇದಾಂತ ಸೂತ್ರಗಳ ಭಾಗಗಳು

ಬ್ರಹ್ಮಸೂತ್ರಗಳಲ್ಲಿ ನಾಲ್ಕು ಅಧ್ಯಾಯಗಳಿವೆ. ಒಂದೊಂದು ಅಧ್ಯಾಯವನ್ನೂ ನಾಲ್ಕು ಪಾದಗಳಾಗಿ ವಿಭಾಗಮಾಡಿದೆ. ಒಂದೊಂದು ಪಾದದಲ್ಲೂ ಹಲವು ಅಧಿಕರಣಗಳಿವೆ. ಆ ಅಧಿಕರಣಗಳು ಸೂತ್ರರೂಪದಲ್ಲಿವೆ. ವೇದಾಂತ ಸೂತ್ರಗಳ ಒಟ್ಟು ಸಂಖ್ಯೆ ೫೫೫. ಈ ಸೂತ್ರಗಳು ತುಂಬ ಸಣ್ಣವು ಮತ್ತು ಸಾರಭೂತ

ವಾದುವು. ಇವುಗಳಲ್ಲಿ ಒಂದು ಅಕ್ಷರವೂ ಕೂಡ ಅನುಪಯುಕ್ತ ವಲ್ಲ. ತುಂಬ ಸಣ್ಣ ಸೂತ್ರಕ್ಕೆ 'ಅಣುಶ್ಚ' ಎಂಬ ೨.೪.೧೩ ನೆಯ ಸೂತ್ರ ಒಂದು ದೃಷ್ಟಾಂತ. ತುಂಬ ದೊಡ್ಡ ಸೂತ್ರಕ್ಕೆ 'ಶಮದಮಾದ್ಯುಪೇತಃ ಸ್ಯಾತ್ತಥಾಪಿ ತು ತದ್ವಿಧೇಸ್ತದ್ವಂಗತಯಾ ತೇಷಾಮವಶ್ಯಾನುಷ್ಠೇಯತ್ವಾತ್'ಎಂಬ ೩.೪. ೨೭ನೆಯ ಸೂತ್ರ ಒಂದು ದೃಷ್ಟಾಂತ. ಒಂದೊಂದು ಸೂತ್ರವೂ ಅದಕ್ಕೆ ಆಧಾರವಾದ ಶ್ರುತಿವಾಕ್ಯಗಳನ್ನು ಗಮನದಲ್ಲಿಟ್ಟುಕೊಂಡೇ ರಚಿಸಿದಂಥುವು. ಪಾಠ ಹೇಳುವ ಕಾಲದಲ್ಲಿ ಈ ಶ್ರುತಿವಾಕ್ಯಗಳನ್ನು ಹೇಳಿ ಸೂತ್ರಗಳ ತಾತ್ಪರ್ಯವನ್ನು ತಿಳಿಸುವುದು ರೂಢಿಯಲ್ಲಿತ್ತು. ತಾತ್ಪರ್ಯ ವನ್ನು ತಿಳಿಸಲು ಉಪಯೋಗಿಸುತ್ತಿದ್ದ ವಿಧಿಗಳು ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತೆ, ಫಲ, ಅರ್ಥವಾದ, ಮತ್ತು ಉಪಪತ್ತಿ. ವಿಮರ್ಶನಾತ್ಮಕವಾದ ಪೂರ್ವಪಕ್ಷ ಅಂದರೆ ವಿರುದ್ಧ ಪಕ್ಷದ ಖಂಡನೆ ಮತ್ತು ಸ್ವಪಕ್ಷ ಅಂದರೆ ಸಿದ್ಧಾಂ ತದ ಸ್ಥಾಪನೆ ವಿಮರ್ಶೆಯ ಅಂಗಗಳು. ಪೂರ್ವ ಮೀಮಾಂ ಸಕರು ವಿಧಿಸಿರುವ ವಾಕ್ಯಾರ್ಥ ಕ್ರಮವನ್ನು ಅನುಸರಿಸಿ ಈ ಸೂತ್ರಗಳ ಮೇಲೆ ಭಾಷ್ಯಗಳು ಹುಟ್ಟಿವೆ. ಭಾಷ್ಯಕಾರನು ವಿಷ ಯವನ್ನು ಸೂಚಿಸಬೇಕು. ಇದಕ್ಕೆ 'ವಿಷಯ' ಎಂದು ಹೆಸರು. ವಿಷಯದ ವಿಚಾರವಾಗಿ ಇರುವ ಸಂಶಯವನ್ನು ಅಂದರೆ 'ವಿಶಯ' ವನ್ನು ತಿಳಿಸಬೇಕು. ಆ ಸಂಶಯಕ್ಕೆ ಕಾರಣವಾದ ವಿರೋಧಿಯ ನಿಲುವನ್ನು ತಿಳಿಸಬೇಕು. 'ಪೂರ್ವಪಕ್ಷ'ವನ್ನು ಖಂಡಿಸಿ ಸ್ವಪಕ್ಷವನ್ನು ಮಂಡಿಸುವುದು 'ಸಿದ್ಧಾಂತ'. ಒಂದು ಸೂತ್ರದ ಸಿದ್ಧಾಂತಕ್ಕೂ ಅದರ ಹಿಂದಿನ ಸೂತ್ರದ ಸಿದ್ಧಾಂತಕ್ಕೂ ನಿಕಟ ಸಂಬಂಧವಿರಬೇಕು. ಈ ನಿಕಟಸಂಬಂಧಕ್ಕೆ 'ಸಂಗತಿ' ಎಂದು

ಹೆಸರು. ಸೂತ್ರಾರ್ಥ ಪೂರ್ಣವಾಗಬೇಕಾದರೆ ಅದು ಈ ಐದಕ್ಕೆ ಅನುಸಾರವಾಗಿರಬೇಕು. ವೇದಾಂತ ಸೂತ್ರ ಭಾಷ್ಯಕಾರರು ಈ ಐದನ್ನೂ ಅನುಸರಿಸಿ ಭಾಷ್ಯವನ್ನು ರಚಿಸಿರುತ್ತಾರೆ.

## ೬. ಬ್ರಹ್ಮಜ್ಞಾನಕ್ಕೆ ಶ್ರುತಿಯೇ ಆಧಾರ

ಸೂತ್ರಗಳ ತತ್ತ್ವಕ್ಕೆ ಶ್ರುತಿಯೊಂದೇ ಆಧಾರ ಶ್ರುತಿಯೇ ಬ್ರಹ್ಮಜ್ಞಾನಕ್ಕೆ ಪರಮಪ್ರಮಾಣ (ಶಾಸ್ತ್ರಯೋನಿತ್ವಾತ್ ೧.೧.೩) ಆ ಜ್ಞಾನವನ್ನು ತರ್ಕದಿಂದ ಸಾಧಿಸಲಾಗುವುದಿಲ್ಲ; ಆಧ್ಯಾತ್ಮಿಕ ಜ್ಞಾನಕ್ಕೆ (ಸಂಯಕ್ ಜ್ಞಾನಕ್ಕೆ) ನಿಗಮನ ತರ್ಕ ಆಶ್ರಯವಾಗಲಾರದು. ಅದರ ಪ್ರತಿಷ್ಠೆ ಅಲ್ಲಿ ನಡೆಯುವುದಿಲ್ಲ. (ತರ್ಕಾ ಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿ ೨.೧ ೧೧). ಶ್ರುತಿ ಪ್ರತ್ಯಕ್ಷವಾಗಿ ಋಷಿಗಳಿಗೆ ಗೋಚರವಾದದ್ದು. ಅದು ಆರ್ಷಜ್ಞಾನ. ತಾರ್ಕಿಕ ಜ್ಞಾನ, ಪರೋಕ್ಷ ಜ್ಞಾನ. ಅದರ ವಿಷಯವೂ ಪರಮವಲ್ಲ; ಅದು ಅನೇಕ, ಅಬಾಧಿತವಲ್ಲ. ಒಬ್ಬನ ತರ್ಕವನ್ನು ಇನ್ನೊಬ್ಬನು ಖಂಡಿಸುತ್ತಾನೆ. ಶ್ರುತಿಯ ವಿಷಯ ಪರಮ, ಅದು ಏಕ ಮಾತ್ರವಾದ ಪರಬ್ರಹ್ಮದಿಂದ ಆವರಿಸಿರುವುದರಿಂದ ಅದು ಅಬಾಧಿತ; ಪರಾಶ್ರಯವಿಲ್ಲದೆ ಸ್ವತಃ ಸಿದ್ಧವಾದದ್ದು. ಪರಮಾತ್ಮವನ್ನು ತಿಳಿಯುವುದಕ್ಕೆ ಎರಡು ಆಸರೆಗಳು, ಶ್ರುತಿ ಮತ್ತು ಸ್ಮೃತಿ. ಶ್ರುತಿಯನ್ನು ಬಾದರಾಯಣರು ಪ್ರತ್ಯಕ್ಷವೆಂದೂ ಸ್ಮೃತಿಯನ್ನು ಅನುಮಾನವೆಂದೂ ಕರೆದಿರುತ್ತಾರೆ. ಅನುಮಾನಕ್ಕೆ ಪ್ರತ್ಯಕ್ಷ ಆಶ್ರಯ. ಹಾಗೆಯೇ ಸ್ಮೃತಿಗೆ ಶ್ರುತಿ ಆಶ್ರಯ. ಶ್ರುತಿ ಎಂದರೆ ಬಾದರಾಯಣರು ಉಪನಿಷತ್ತುಗಳೆಂದು ಭಾವಿಸಿರುತ್ತಾರೆ. ಸ್ಮೃತಿ ಎಂದರೆ ಭಗವದ್ಗೀತೆ, ಮಹಾಭಾರತ ಮತ್ತು ಮನು ಧರ್ಮಶಾಸ್ತ್ರ. ಈ

ಮೂರಕ್ಕೂ ಉಪನಿಷತ್ತುಗಳೇ ಆಶ್ರಯ. ಋಷಿಗಳು ಪ್ರತ್ಯಕ್ಷವಾಗಿ ದರ್ಶಿಸಿದ್ದನ್ನು ಆಧಾರವಾಗಿಟ್ಟುಕೊಂಡು ಅವುಗಳನ್ನು ಇತರರು ಬೆಳಸಿರುತ್ತಾರೆ. ಬಾದರಾಯಣರು ಉಪನಿಷತ್ತುಗಳ ತತ್ತ್ವಕ್ಕೆ ವಿರುದ್ಧವಾದ ತತ್ತ್ವಗಳನ್ನು ಉಪನಿಷತ್ತಿನ ವಾಕ್ಯಗಳ ಮೂಲ ಕವೇ ಖಂಡಿಸಿರುತ್ತಾರೆ. ಉಪನಿಷತ್ತುಗಳ ತತ್ತ್ವಕ್ಕೆ ವಿರುದ್ಧವಾಗಿ ತರ್ಕದ ಆಶ್ರಯ ಪಡೆದಿರುವ ತತ್ತ್ವ ಬ್ರಹ್ಮವಿಚಾರದಲ್ಲಿ ಪ್ರಮಾಣ ವಲ್ಲ. ಬ್ರಹ್ಮಕ್ಕೆ ಶ್ರುತಿಯೇ ಪ್ರಮಾಣ (ಶ್ರುತೇಸ್ತು ಶಬ್ದಮೂಲ ತ್ವಾತ್ ೨.೧.೨೭). ಅನುಮಾನಕ್ಕೆ ಲಿಂಗ ಆಧಾರ. ಬ್ರಹ್ಮ ಜ್ಞಾನಕ್ಕೆ ಲಿಂಗದ ಮಧ್ಯಸ್ಥಿಕೆ ಬೇಕಿಲ್ಲ. ಏಕೆಂದರೆ ಬ್ರಹ್ಮವೇ ಎಲ್ಲಕ್ಕೂ ಆಧಾರವಾದ್ದರಿಂದ ಅದಕ್ಕೆ ಬೇರೆಯದರ ಮಧಸ್ಥಿಕೆ ಅನ ಗತ್ಯ. ಬ್ರಹ್ಮಜ್ಞಾನ ಸ್ವಪ್ರತಿಷ್ಠಿತ. ಬುದ್ಧ, ಜಿನ, ಕಣಾದ, ಅಕ್ಷ ಪಾದ, ಕಪಿಲ, ಪತಂಜಲಿ ಇವರ ತರ್ಕ ಪರಸ್ಪರ ವಿರುದ್ಧವಾಗಿದೆ ಯಾದುದರಿಂದ ಅದು ಅಪ್ರತಿಷ್ಠಿತ ಎಂಬುದು ಸ್ಪಷ್ಟಪಡುತ್ತದೆ. ಇಂದ್ರಿಯಗಳು ಬಾಹ್ಯಪದಾರ್ಥಗಳನ್ನು ನೋಡುತ್ತವೆ. ತರ್ಕ ಇಂದ್ರಿಯಾನುಭವಗಳನ್ನು ಅನುಸರಿಸಿ ಬಾಹ್ಯವಸ್ತುಗಳ ಸಂಬಂಧ ವನ್ನು ತಿಳಿಸುತ್ತದೆ. ಇಂದ್ರಿಯಪ್ರತ್ಯಕ್ಷ ಮತ್ತು ಅನುಮಾನಗಳು ಅಂತರಾತ್ಮವಾದ ಬ್ರಹ್ಮವನ್ನು ತಿಳಿಯಲಾರವು. ಹಾಗೆ ತಿಳಿಯಲು ಪ್ರಯತ್ನಿಸಿದಾಗ ಅವು ಸೋತು ಹಿಮ್ಮೆಟ್ಟುತ್ತವೆ. (ಕಠ ೨. ೬. ೯). ಯೋಗಿಗಳಾದರೋ ಧ್ಯಾನದ ಮೂಲಕ ತಮ್ಮ ಗಮನವನ್ನು ಹೊರ ಪದಾರ್ಥಗಳಿಂದ ಸೆಳೆದು ಒಳಗಿರುವ ಪ್ರತ್ಯಗಾತ್ಮದಲ್ಲಿ ನಿಲ್ಲಿಸುತ್ತಾರೆ. ಬ್ರಹ್ಮ ಆರ್ಷಜ್ಞಾನಗೋಚರ, ಇಂದ್ರಿಯಗಳಿಗೆ ಮತ್ತು ತರ್ಕಕ್ಕೆ ಸಿಲುಕುವುದಿಲ್ಲ. ಈ ವಿಚಾರದಲ್ಲಿ ಭಾಷ್ಯಕಾರ ರಲ್ಲಿ ಮತಭೇದವಿಲ್ಲ.

## ೭. ಮೊದಲನೆಯ ಅಧ್ಯಾಯ

ಮೊದಲನೆಯ ಅಧ್ಯಾಯದ ಹೆಸರು ಸಮನ್ವಯಾಧ್ಯಾಯ. ಈ ಅಧ್ಯಾಯದಲ್ಲಿ ಉಪನಿಷದ್ವಾಕ್ಯಗಳ ತತ್ತ್ವವನ್ನು ಸಮನ್ವಯಗೊಳಿಸಿದೆ. ಇದು ಬ್ರಹ್ಮನ್, ವಿಶ್ವ, ಮತ್ತು ಆತ್ಮ—ಈ ಮೂರರ ಸಂಬಂಧವನ್ನು ತಿಳಿಸುತ್ತದೆ.

ಈ ಅಧ್ಯಾಯ 'ಅಥಾತೋ ಬ್ರಹ್ಮ ಜಿಜ್ಞಾಸಾ' ಎಂಬ ಸೂತ್ರದಿಂದ ಪ್ರಾರಂಭವಾಗುತ್ತದೆ. ಬ್ರಹ್ಮಜಿಜ್ಞಾಸಾ ಎಂದರೆ ಬ್ರಹ್ಮವನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆ. ಜಿಜ್ಞಾಸಾ ಮೂಢ ನಂಬಿಕೆಯಿಂದ ಹುಟ್ಟುವ ತಿಳಿವಲ್ಲ. ವಿಚಾರದಿಂದ ಹುಟ್ಟುವ ತಿಳಿವು. ಸುಪ್ರಸಿದ್ಧವಾದ ಪರಮ ಆತ್ಮದ ವಿಚಾರವಾಗಿ ವಿರುದ್ಧಾಭಿಪ್ರಾಯಗಳಿವೆ. ಇದನ್ನು ಕುರಿತ ಉಪನಿಷದ್ವಾಕ್ಯಗಳ ವಿಚಾರವಾಗಿಯೂ ಭಿನ್ನಾಭಿಪ್ರಾಯಗಳಿವೆ. ಆದ್ದರಿಂದ ಈ ವಾಕ್ಯಗಳ ವಿಚಾರವಾಗಿ ಅಸಾಂಗತ್ಯವಿಲ್ಲದಂತೆ ತರ್ಕಿಸಿ ಬ್ರಹ್ಮವನ್ನು ತಿಳಿದುಕೊಂಡ ಹೊರತು ಆತ್ಮಜ್ಞಾನ ಫಲಿಸುವುದಿಲ್ಲ. ಆದ್ದರಿಂದ ಇಲ್ಲಿರುವ ಸೂತ್ರಗಳಲ್ಲಿ ಉದ್ದಕ್ಕೂ ವಿಚಾರದಿಂದ ಸಮನ್ವಯಗೊಳಿಸುವ ಮೀಮಾಂಸೆ ಕಂಡುಬರುತ್ತದೆ.

ಈ ಜಗತ್ತಿನ ಹುಟ್ಟು ಯಾವುದರಿಂದ ಆಯಿತೋ ಅದು ಬ್ರಹ್ಮ (೧.೧.೨). ಈ ಬ್ರಹ್ಮದ ತಿಳಿವಿಗೆ ಶಾಸ್ತ್ರ ಅಂದರೆ ಉಪನಿಷತ್ತೇ ಯೋನಿ, ಅಂದರೆ ಪ್ರಮಾಣ. ತೈತ್ತಿರೀಯ ಉಪನಿಷತ್ತಿನ ೩.೧ ಈ ರೀತಿ ಹೇಳಿದೆ. ಯಾವುದರಿಂದ ಇಲ್ಲಿರುವುದೆಲ್ಲ ಹುಟ್ಟುತ್ತವೆಯೋ, ಹುಟ್ಟಿದವು ಯಾವುದರಿಂದ ಬಾಳುತ್ತವೆಯೋ ಮತ್ತು ಅವು ಇಲ್ಲಿಂದ ನಿರ್ಗಮಿಸಿದಾಗ ಯಾವುದನ್ನು ಸೇರುತ್ತವೆಯೋ ಅದನ್ನು ತಿಳಿದುಕೊ. ಅದೇ ಬ್ರಹ್ಮ. ವಿಶ್ವದ ಹುಟ್ಟಿಗೆ ಸಾಂಖ್ಯರು

ಭಾವಿಸುರುವಂತೆ, ಪ್ರಕೃತಿ (ಪ್ರಧಾನ) ಕಾರಣವಲ್ಲ (೧.೧.೪.). ಏಕೆಂದರೆ ಪ್ರಧಾನಕ್ಕೆ ಈಕ್ಷಣ ಅಂದರೆ ಪ್ರೇಕ್ಷಣ ಶಕ್ತಿ ಇಲ್ಲ. (ಛಾಂದೋಗ್ಯ೬.೨.೧೩.) ಬ್ರಹ್ಮವನ್ನು ಕುರಿತು ಅದು ಈಕ್ಷಿಸಿತು ಎಂದು ಹೇಳಿದೆ. ಅಲ್ಲಿ ಆತ್ಮಶಬ್ದವಿರುವುದರಿಂದ ಈಕ್ಷಣ ಗೌಣ, ಔಪಚಾರಿಕ ಎಂದು ಭಾವಿಸಲಾಗುವುದಿಲ್ಲ. ಅದರಲ್ಲಿ ನಿಷ್ಠೆಯುಳ್ಳ ವನಿಗೆ ಮೋಕ್ಷ ದೊರೆಯುವುದೆಂದು ಹೇಳಿರುವುದರಿಂದ ಪ್ರಧಾನ ವನ್ನು ಆತ್ಮವೆಂದು ಕರೆಯಲಾಗುವುದಿಲ್ಲ (೧.೧.೭.). ಪ್ರಧಾನವನ್ನು ಸತ್ ಶಬ್ದದಿಂದ ಸೂಚಿಸಲಾಗುವುದಿಲ್ಲ. ಯಾವು ದನ್ನು ತಿಳಿದಾಗ ಚೇತನಾಚೇತನವಾದ ಎಲ್ಲವನ್ನೂ ತಿಳಿದಂತಾಗು ತ್ತದೆಯೋ ಅದು ಬ್ರಹ್ಮ ಎಂದು (ಛಾ ೧.೧.೯) ಹೇಳಿರುತ್ತದೆ. ಪ್ರಧಾನ ಚೇತನ ವಸ್ತುಗಳಿಗೆ ಕಾರಣವಾಗಲಾರದು. ಆದ್ದರಿಂದ ಪ್ರಕೃತಿ ಜಗತ್ತಿನ ಕಾರಣವಾಗಲಾರದು. ಚೇತನವು ಅಚೇತನದಲ್ಲಿ ಲೀನವಾಗಲಾರದು. (ಛಾ. ೭.೮.೧.) ಪುರುಷನು ನಿದ್ರಿಸುವಾಗ ಅವನು ಸದ್ವಸ್ತುವಿನಲ್ಲಿ ಲೀನವಾಗುತ್ತಾನೆ. ತನ್ನ ಆತ್ಮದಲ್ಲೇ ಲೀನವಾಗುತ್ತಾನೆ. ಆದ್ದರಿಂದ ಅವನನ್ನು ಕುರಿತು 'ಸ್ವಪತಿ' ಎಂದು ಹೇಳುತ್ತಾರೆ. ಏಕೆಂದರೆ ಅವನು ತನ್ನಲ್ಲಿಯೇ ಲೀನವಾಗು ತ್ತಾನೆ ಎಂದು ಹೇಳಿರುತ್ತದೆ. 'ಇಲ್ಲಿ' ಎಂಬ ಶಬ್ದಕ್ಕೆ ಪ್ರಕೃತಿ ಎಂಬ ಅರ್ಥ ಕೊಟ್ಟರೆ, ಚೇತನವು ಅಚೇತನದಲ್ಲಿ ಲೀನವಾಗುತ್ತದೆ ಎಂದು ಅಸಂಬದ್ಧವಾದದ್ದನ್ನು ಹೇಳಿದಂತಾಗುತ್ತದೆ. ಹೀಗೆ ವೇದ ವಾಕ್ಯಗಳು ಏಕರೀತಿಯಾಗಿರುವುದರಿಂದ ಬ್ರಹ್ಮವೇ ಜಗತ್ಕಾರಣ. ಅದಲ್ಲದೆ ಶ್ರುತಿ, ಉದಾಹರಣೆಗೆ ಶ್ವೇತಾಶ್ವತರ ಉಪನಿಷತ್ತು (೬.೯) "(ಸರ್ವಜ್ಞನಾದ) ಅವನು ಕಾರಣನು, ಜೀವರುಗಳ ಇಂದ್ರಿಯ ಗಳಿಗೆ ಒಡೆಯನಾದ ಅಧಿಪತಿ" ಎಂದು ಸ್ಪಷ್ಟವಾಗಿ ಹೇಳಿರುವುದ

ರಿಂದ ಬ್ರಹ್ಮವೇ ಜಗತ್ಕಾರಣ.

ಬ್ರಹ್ಮದ ಸ್ವರೂಪ ಆನಂದಮಯವಾದದ್ದು (೧.೧.೧೨). ಆನಂದವೇ ಬ್ರಹ್ಮ ಎಂದು ಹಲವು ಉಪನಿಷದ್ವಾಕ್ಯಗಳು ಒಂದೇ ರೀತಿಯಾಗಿ ಹೇಳಿರುವುದರಿಂದ ಅದು ಅನ್ನಮಯ ಪ್ರಾಣಮಯ ಎಂಬ ಮಾತುಗಳಂತೆ ವಿಕಾರಗಳನ್ನು ಸೂಚಿಸದೆ ಅಂತಿಮವಾದ ವಿಕಾರವಿಲ್ಲದ ಆನಂದರೂಪನಾದ ಬ್ರಹ್ಮವನ್ನೇ ತಿಳಿಸುತ್ತವೆ (೧.೧.೧೩). ಆನಂದ ಎಲ್ಲಕ್ಕಿಂತ ಮೇಲಿನದು. ಅದೇ ಬ್ರಹ್ಮದ ಪರಿಪೂರ್ಣ ಸ್ವರೂಪ. ಆನಂದಮಯನು ಜೀವಾತ್ಮನಲ್ಲವೆಂಬುದೇ ಸೂತ್ರಕಾರನ ಸಿದ್ಧಾಂತ. ಜೀವಾತ್ಮನು ಅನುಭವಿಸುವ ಆನಂದ ಸ್ವಲ್ಪವಾದದ್ದು. ಪರಮಾತ್ಮನ ಆನಂದವಾದರೊ ಅದಕ್ಕೆ ನೂರರಷ್ಟು ಹೆಚ್ಚಿನದೆಂದೂ, ಅಪಾರವಾದದ್ದೆಂದೂ ತೈತ್ತಿರೀಯ ತಿಳಿಸುತ್ತದೆ. ಆದ್ದರಿಂದ ಆನಂದಕ್ಕೆ ಪ್ರಾಚುರ್ಯವಿದೆ. "ಇವನೇ ಅಲ್ಲವೇ ಆನಂದಪಡಿಸುವವನು?" ಎಂದು ತೈತ್ತಿರೀಯ ಹೇಳಿದಾಗ ಬ್ರಹ್ಮವೇ ಆನಂದಕ್ಕೆ ಕಾರಣವೆಂದು ಹೇಳಿದಂತಾಗುತ್ತದೆ. ಜೀವರ ಆನಂದಕ್ಕೆ ಕಾರಣನಾದವನು ಪರಮಾತ್ಮನೇ ಹೊರತು ಜೀವರುಗಳೇ ಅಲ್ಲ. ಜೀವಾತ್ಮನು ಆನಂದವನ್ನು ಪಡೆದುಕೊಳ್ಳುವವನು. ಆದ್ದರಿಂದ ಪಡೆದುಕೊಳ್ಳುವವನು ಅದನ್ನು ಕೊಡುವವದ್ದರಿಂದ ಭಿನ್ನ. (ಭೇದವ್ಯಪದೇಶಾಚ್ಚ, ೧.೧.೧೭). ಆನಂದಮಯ ಬ್ರಹ್ಮನಿಗೆ 'ನಾನು ಬಹುವಾಗುವೆನು' ಎಂಬ ಬಯಕೆಯನ್ನು ತಿಳಿಸಿರುವುದರಿಂದ ಪ್ರಕೃತಿ ಆನಂದಮಯವೂ ಅಲ್ಲ ಸೃಷ್ಟಿಗೆ ಕಾರಣವೂ ಅಲ್ಲ.

ಈ ಅಧ್ಯಾಯದ ಇತರ ಸೂತ್ರಗಳು ಬ್ರಹ್ಮದ ವಿಶ್ವವ್ಯಾಪಕತ್ವವನ್ನೂ ಅಂತರ್ಯಾಮಿತ್ವವನ್ನೂ ತಿಳಿಸುತ್ತವೆ. ಬ್ರಹ್ಮವು ಸರ್ವವ್ಯಾಪಿಯಾದ ಬೆಳಕು. ಆದಿತ್ಯನಲ್ಲಿ ಮತ್ತು ಚಕ್ಷುಸ್ಸಿನ ಒಳಗೂ

ಇರುವವನೂ ಪರಮೇಶ್ವರನೇ (೧.೧.೨೦). ಆದಿತ್ಯ ಪುರುಷನು ಜೀವಾತ್ಮನಿಗಿಂತ ಬೇರೆಯಾದವನು (೧.೧.೨೧). ಬೃಹದಾರಣ್ಯಕದ ೩.೭.೯ ಇದಕ್ಕೆ ಆಧಾರ: "ಯಾವನಿಗೆ ಆದಿತ್ಯನು ಶರೀರವೋ, ಯಾವನು ಒಳಗಿದ್ದುಕೊಂಡು ಆದಿತ್ಯನನ್ನು ನಿಯಮಿಸುವನೋ ಅವನೇ ಅಂತರ್ಯಾಮಿ. ಅವನೇ ನಿನ್ನ ಅಮೃತನಾದ ಆತ್ಮನು." ವೈಶ್ವಾನರನೂ ಬ್ರಹ್ಮವೇ; ಅಗ್ನಿದೇವತೆಯೂ ಅಲ್ಲ, ಭೂತಾಗ್ನಿಯೂ ಅಲ್ಲ (೧.೨.೨೪.೭೨.). ದ್ಯುಲೋಕ, ಭೂಮಿ ಮೊದಲಾದ ಎಲ್ಲಕ್ಕೂ. ಬ್ರಹ್ಮವೇ ಆಶ್ರಯ (೧.೩.೧). ಆಕಾಶವೂ ಬ್ರಹ್ಮವೇ (೧.೧.೨೨). ಇದಕ್ಕೆ ಆಧಾರವಾದ ಛಾಂದೋಗ್ಯದ ವಚನ (೧.೯.೧): "ಈ ಭೂತಗಳೆಲ್ಲವೂ ಆಕಾಶದಿಂದಲೇ ಬಂದಿವೆ. ಆಕಾಶದಲ್ಲೇ ಲಯವಾಗುತ್ತವೆ." ಏಕೆಂದರೆ ಆಕಾಶವೇ ಇವೆಲ್ಲಕ್ಕಿಂತ ಮಹತ್ತರವಾದದ್ದು. ಇಲ್ಲಿನ ಆಕಾಶ ಭೂತಾಕಾಶವಲ್ಲ. ಆನಂದದಿಂದ ಆವೃತವಾದ ಆಕಾಶವೂ ಬ್ರಹ್ಮವೇ ಎಂಬಂತೆ ಪ್ರಾಣವೂ ಬ್ರಹ್ಮವೇ(೧.೧.೨೩).ಆದಕ್ಕೆ ಆಕರವಾದ ಶ್ರುತಿ ಛಾಂದೋಗ್ಯದ ೧.೧೧.೪: "ಈ ಭೂತಗಳೆಲ್ಲ ಪ್ರಾಣವನ್ನೇ ಪ್ರವೇಶಿಸುತ್ತವೆ ಮತ್ತು ಪ್ರಾಣದಿಂದಲೇ ಹೊರಬರುತ್ತವೆ." ಇಲ್ಲಿನ ಪ್ರಾಣ ಭೌತವಾದ ವಾಯುವಲ್ಲ. ಮುಖ್ಯಪ್ರಾಣ; ಪ್ರಾಣದ ಪ್ರಾಣವಾದ ಪರಮಾತ್ಮ. ಈ ಪ್ರಾಣವೇ ಪ್ರಜ್ಞಾತ್ಮನು, ಆನಂದನು, ಅಜರನು, ಅಮೃತನು ಎಂದು ಕೌಷೀತಕೀ ಉಪನಿಷತ್ತು ಸ್ಪಷ್ಟಪಡಿಸುತ್ತದೆ. ಮನೋಮಯನೂ ಬ್ರಹ್ಮವೇ (೧.೨.೧.) ಸರ್ವಂ ಖಲ್ವಿದಂ ಬ್ರಹ್ಮ (ಛಾಂ. ೩.೧೪.೧.). ಎಲ್ಲವೂ ಬ್ರಹ್ಮದಿಂದ ವ್ಯಾಪಕವಾದದ್ದು ಎಂಬುದು ಉಪಾಸನೆಗೋಸ್ಕರ ಹೇಳಿರುವ ಮನೋಮಯತ್ವಕ್ಕೂ ಅನ್ವಯವಾಗುತ್ತದೆ. ಮನೋಮಯತ್ವ ಜೀವನಿಗೆ ಅನ್ವಯವಾಗ

ಲಾರದು. ಬ್ರಹ್ಮನು ಅಂತರ್ಯಾಮಿ(೧ ೨.೧೮). ಅಂತರ್ಯಾಮಿ ಸಾಂಖ್ಯದಲ್ಲಿ ಹೇಳಿರುವ ಪ್ರಕೃತಿಯಲ್ಲ. ಏಕೆಂದರೆ ಇಲ್ಲಿ ಹೇಳಿರುವ ಅಂತರ್ಯಾಮಿಯ ಧರ್ಮಗಳು ಬೇರೆ ೧ ೨.೧೯ ). ಇಲ್ಲಿ ಹೇಳಿರುವ ಅಂತರ್ಯಾಮಿ ಚೇತನ ಸ್ವರೂಪನು, ಪ್ರಕೃತಿಯು ಅಚೇತನವಾದದ್ದು. ಶರೀರದಲ್ಲಿರುವ ಜೀವನೂ ಚೇತನರೂಪನಾದ್ದರಿಂದ ಅಂತರ್ಯಾಮಿಯಾಗಬಹುದು ಎಂದು ವಾದಿಸಬಹುದು. ಈ ವಾದವೂ ಸರಿಯಲ್ಲ. ಏಕೆಂದರೆ ಕಣ್ವ ಮತ್ತು ಮಾಧ್ಯಂದಿನ ಎಂಬ ಎರಡು ಶಾಖೆಯವರೂ ಜೀವನು ಪರಮಾತ್ಮನಿಂದ ನಿಯಮಿತನಾದವನು ಎಂದು ಹೇಳಿರುತ್ತಾರೆ. ಭೂಮವೂ ಬ್ರಹ್ಮವೇ. ಅದಕ್ಕೆ ಆಧಾರ ಛಾಂದೋಗ್ಯ.೭.೨೩.೨೪. "ಎಲ್ಲಿ ಬೇರೊಂದನ್ನು ನೋಡುವುದಿಲ್ಲವೋ ಬೇರೊಂದನ್ನು ಕೇಳುವುದಿಲ್ಲವೋ ಬೇರೊಂದನ್ನು ಅರಿಯುವುದಿಲ್ಲವೋ ಅದು ಭೂಮ. ಎಲ್ಲಿ ಬೇರೊಂದನ್ನು ನೋಡುವನೋ ಬೇರೊಂದನ್ನು ಕೇಳುವನೋ ಬೇರೊಂದನ್ನು ತಿಳಿಯುವನೋ ಅದು ಅಲ್ಪ. ಭೂಮವು ಪ್ರಾಣವಲ್ಲ. ಏಕೆಂದರೆ ಸನತ್ಕುಮಾರನು ನಾರದನಿಗೆ ಉಪದೇಶ ಮಾಡುವಾಗ ಪ್ರಾಣಕ್ಕಿಂತ ಭೂಮ ಹೆಚ್ಚಿನದೆಂದು ಹೇಳಿರುತ್ತಾನೆ. (೧.೩.೮.) ಅಲ್ಲದೆ ಶ್ರುತಿಯು ಹೇಳುವ ಧರ್ಮಗಳೆಲ್ಲವೂ ಭೂಮಕ್ಕೆ ಹೊಂದುತ್ತವೆ (೧,೩.೯). ಅಕ್ಷರವೂ ಬ್ರಹ್ಮವೇ, ಏಕೆಂದರೆ ಅದು ಆಕಾಶದವರೆಗೂ ಎಲ್ಲಕ್ಕೂ ಆಧಾರವಾಗಿದೆ. ಅಕ್ಷರವು ವರ್ಣ ಸೂಚಕವಲ್ಲ. ಅಕ್ಷರವೆಂದರೆ ಕ್ಷಯವಿಲ್ಲದ್ದು. ಯಾವುದಕ್ಕೆ ಕ್ಷಯವಿಲ್ಲವೊ. ಅದೇ ಬ್ರಹ್ಮ. ಅಕ್ಷರದ ಪ್ರಶಾಸನದಿಂದ ಅಂದರೆ ಉಲ್ಲಂಘಿಸಲಾಗದ, ಮೀರಲಾಗದ ಆಜ್ಞೆಯಿಂದಲೇ ಸೂರ್ಯ ಚಂದ್ರರು ತಮ್ಮ ಸ್ಥಾನದಲ್ಲಿ ನಿಂತಿರುವುದು (ಬೃ. ಉ. ೩.೮.೯) ಅಕ್ಷರವು ವಿಜ್ಞಾತೃವು.

ಅದಕ್ಕಿಂತ ಬೇರೆಯಾದ ವಿಜ್ಞಾತೃತ್ವವಿಲ್ಲ. (ಬೃ. ಉ. ೩.೮.೧೧). ಅದು ಈಕ್ಷಣಕ್ಕೆ ವಿಷಯವಾದ್ದರಿಂದ, ಅದು ಎಲ್ಲದಕ್ಕೂ ಧ್ಯೇಯ. (೧.೩.೧೩). ಅವನು ಶ್ರೇಷ್ಠನಾದ ಹಿರಣ್ಯ ಗರ್ಭನಿಗಿಂತ ಶ್ರೇಷ್ಠನು (ಪ್ರಶ್ನ. ಉ. ೫.೫.). ಸಮ್ಯಕ್ ದರ್ಶನಕ್ಕೆ ಧ್ಯೇಯ ವಾಗಬಲ್ಲದ್ದು ಪರಬ್ರಹ್ಮವೇ. ಯಾವುದಕ್ಕಿಂತ ಶ್ರೇಷ್ಠವಾದ್ದು ಇಲ್ಲವೋ ಅದೇ ಪರಬ್ರಹ್ಮ. ಬ್ರಹ್ಮವು ಸ್ವಪ್ರಕಾಶ ರೂಪನು. ಪ್ರಕಾಶಿಸುವ ಅವನನ್ನು ಅನುಸರಿಸಿ ಅವನ ಪ್ರಕಾಶದಿಂದಲೇ ಎಲ್ಲವೂ ಪ್ರಕಾಶಿಸುತ್ತಿರುವುದರಿಂದ ಅವನು ಪ್ರತ್ಯಗಾತ್ಮನು (೧.೩.೨೨). ಅಂಗುಷ್ಠ ಪ್ರಮಾಣವುಳ್ಳ ಪುರುಷನೂ ಪರಮ ಪುರುಷನೇ (೧.೩.೨೪). ಅವನು ಜೀವನಲ್ಲ. ಏಕೆಂದರೆ ಅವನು ಭೂತಭವಿಷ್ಯಗಳಿಗೆ ಒಡೆಯನು ಎಂದು ಹೇಳಿದೆ. ಭೂತಭವಿಷ್ಯಗಳ ಮೇಲಿನ ಒಡೆಯ ಎಂಬ ವರ್ಣನೆ ಜೀವನಿಗೆ ಹೊಂದುವುದಿಲ್ಲ. ಅವನು ಸೂಜಿಯ ಮೊನೆಯಷ್ಟು ಸೂಕ್ಷ್ಮನು, ಅಣುವಿನಲ್ಲಿ ಅಣು, ಮಹತ್ತರವಾದುದರಲ್ಲಿ ಮಹತ್ತರವಾದವನು ಎಂದು ಶ್ವೇತಾಶ್ವತರ ಉಪನಿಷತ್ತು ಹೇಳಿರುತ್ತದೆ.

ಶ್ರುತಿ ಹೇಳಿರುವ ಆತ್ಮವು ಪರಮಾತ್ಮನೇ (೧.೪.೨೨). ಬೃಹದಾರಣ್ಯಕದಲ್ಲಿ "ಮೈತ್ರೇಯೀ, ಆತ್ಮವನ್ನು ನೋಡಬೇಕು, ಕೇಳಬೇಕು, ಮನನ ಮಾಡಬೇಕು, ನಿಧಿಧ್ಯಾಸನ ಮಾಡಬೇಕು. ಮೈತ್ರೇಯೀ. ಅವನನ್ನು ನೋಡಿದರೆ, ಕೇಳಿದರೆ ಮನನಮಾಡಿದರೆ ತಿಳಿದುಕೊಂಡರೆ ಇದೆಲ್ಲವೂ ತಿಳಿದಂತಾಗುತ್ತದೆ(೪ ೫.೬.)" ಎಂದು ಹೇಳಿರುವ ಆತ್ಮ ಪರಮಾತ್ಮನೇ. ಪತಿ, ಪುತ್ರ, ವಿತ್ತ, ಇವೆಲ್ಲವೂ ಇರುವುದು ಆತ್ಮನ ಕಾಮಕ್ಕಾಗಿ ಎಂದು ಹಿಂದಿನ ವಾಕ್ಯಗಳಲ್ಲಿ ಹೇಳಿರುವುದರಿಂದ ಈ ಆತ್ಮ ಜೀವಾತ್ಮನೇ ಎಂದು ಕೆಲವರು ಅರ್ಥ

ವನ್ನು ಕಲ್ಪಿಸಿರುತ್ತಾರೆ. ಇದು ಸರಿಯಲ್ಲ. ಏಕೆಂದರೆ ಆತ್ಮವನ್ನು ತಿಳಿದುಕೊ ಎಂದು ಹೇಳುವುದು ಮೋಕ್ಷಪ್ರಾಪ್ತಿಗಾಗಿ. ಪತಿ, ಪುತ್ರ, ವಿತ್ತಗಳನ್ನು ಪಡೆಯುವುದಕ್ಕಲ್ಲ. ಅಂಥವುಗಳನ್ನು ಪಡೆಯ ಬಯಸುವ ಜೀವಾತ್ಮನಿಗೆ ಮೋಕ್ಷವಿಲ್ಲ. ಆದ್ದರಿಂದ ಇಲ್ಲಿ ಮೋಕ್ಷಕ್ಕೆ ಧ್ಯೇಯವಾದದ್ದು ಪರಮಾತ್ಮನೇ ; ಜೀವಾತ್ಮ ಧ್ಯೇಯಾತ್ಮವಲ್ಲ.

ಈ ವಿಚಾರದಲ್ಲಿ ಬಾದರಾಯಣರು ಆತ್ಮರಥ್ಯ, ಔಡುಲೋಮಿ ಮತ್ತು ಕಾಶಕೃತ್ಸ್ನ–ಈ ಮೂವರ ಅಭಿಪ್ರಾಯಗಳನ್ನೂ ಅನುವಾದಮಾಡಿರುತ್ತಾರೆ. ಪರಮಾತ್ಮ ಕಾರಣ ; ಜೀವಿ ಅವನ ಕಾರ್ಯ. ಜೀವಿಯು ತನ್ನನ್ನು ತಿಳಿದುಕೊಳ್ಳಬೇಕಾದರೆ ತಾನು ಪರಮಾತ್ಮನ ಕಾರ್ಯ, ಪರಮಾತ್ಮನಿಗೆ ಅಧೀನ ಎಂದು ಭಾವಿಸಬೇಕು. ಅಧೀನವಾದದ್ದು ಅಧೀನವಲ್ಲದ್ದರಿಂದ ಭಿನ್ನ. ಜೀವನು ಅಧೀನ, ಪರಮಾತ್ಮ ಸ್ವತಂತ್ರ. (ಜೀವರನ್ನೂ ಜಗತ್ತನ್ನೂ ಬಿಟ್ಟು) ಪರಮಾತ್ಮ ತಾನೇತಾನಾಗಿ ಇರುವುದು ಸಾಧ್ಯ. ಐತರೇಯ ಆರಣ್ಯಕ (೨.೪.೧೧): ಸೃಷ್ಟಿಗೆ ಮೊದಲು ಆತ್ಮನೊಬ್ಬನೆ ಇದಾಗಿದ್ದನು ಎಂದು ಸ್ಪಷ್ಟಪಡಿಸಿದೆ. ಆದರೆ ಪರಮಾತ್ಮನನ್ನು ಬಿಟ್ಟು ಬೇರೆ ಯಾವುದೂ ಇರಲು ಸಾಧ್ಯವಿಲ್ಲ. ಆದನ್ನು ಬಿಟ್ಟು ಅಗ್ನಿಗೆ ಒಂದು ಹುಲ್ಲುಕಡ್ಡಿಯನ್ನು ಸುಡಲಾಗಲಿಲ್ಲ, ವಾಯುವಿಗೆ ಒಂದು ಹುಲ್ಲುಕಡ್ಡಿಯನ್ನು ಕೂಡ ಹಾರಿಸಲಾಗಲಿಲ್ಲ. ಪರಮಾತ್ಮನೂ ಜೀವನೂ ಭಿನ್ನವೆಂಬ ತಿಳಿವು ಜೀವರುಗಳ ಶ್ರೇಯಸ್ಸಿಗೆ ಕಾರಣ (ಲಿಂಗ), (ಪ್ರತಿಜ್ಞಾ ಸಿದ್ಧೇರ್ಲಿಂಗ ೧.೪.೨೦).

ಔಡುಲೋಮಿ ಭೇದಾಭೇದವಾದಿ. ಶರೀರಿಯಾಗಿದ್ದಷ್ಟು ಕಾಲವೂ ಆದರಿಂದ ಕಲುಷಿತರಾದ್ದರಿಂದ ಆ ಕಾಲದಲ್ಲಿ ನಿತ್ಯ ಪರಿ

ಶುದ್ಧನಾದ ಪರಮಾತ್ಮನಿಗಿಂತ ಅವನು ಭಿನ್ನ. ಕೊಳೆಯನ್ನು ಕಳೆದು ಕೊಂಡು ಮುಕ್ತನಾದ ಜೀವ ಪರಮಾತ್ಮನಿಂದ ಅಭಿನ್ನ,(ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ ೧.೪.೨೧) ಔಡು ಲೋಮಿಯ ಪಕ್ಷಕ್ಕೆ ಅನುಕೂಲವಾದ ಶ್ರುತಿವಾಕ್ಯಗಳು ಇವು: ಈ ಸಂಪ್ರಸಾದ ಗುಣಗಳುಳ್ಳ ಆತ್ಮನು ಶರೀರದಿಂದ ಎದ್ದು ಪರ ಮಾತ್ಮನ ಜ್ಯೋತಿಯನ್ನು ಸೇರಿಕೊಂಡು ತನ್ನ ರೂಪದಿಂದ ಕಾಣಿಸಿ ಕೊಳ್ಳುತ್ತಾನೆ. (ಛಾ.ಉ ೮-೧೨-೩) ಹರಿಯುತ್ತಿರುವ ನದಿ ಗಳು ನಾಮರೂಪವನ್ನು ಬಿಟ್ಟು ಸಮುದ್ರದಲ್ಲಿ ಅದೃಶ್ಯವಾಗುವಂತೆ ವಿದ್ವಾಂಸನು ನಾಮರೂಪಗಳಿಂದ ಬಿಡುಗಡೆಯಾಗಿ ಪರಾತ್ಪರನೂ ದಿವ್ಯನೂ ಆದ ಪುರುಷನನ್ನು ಹೊಂದುತ್ತಾನೆ (ಮುಂ.ಉ.೭.೨.೮).

ಕಾಶಕೃತ್ಸ್ನನು ಅಭೇದವಾದಿ. ಜೀವನು ಅವಿಕಾರಿಯಾದ ಪರಮೇಶ್ವರನೇ, ಬೇರೆಯಲ್ಲ. ಇದಕ್ಕೆ ಆಧಾರವಾಕ್ಯ. ಛಾಂದೋಗ್ಯ ಉಪನಿಷತ್ತಿನ(೬-೨-೨.): "ಈ ಜೀವಾತ್ಮರೂಪದಿಂದ ಈ ಮೂರು ದೇವತೆಗಳನ್ನೂ ಪ್ರವೇಶಿಸಿ ನಾಮರೂಪಗಳನ್ನು ವಿಂಗಡಿಸುವೆನು." ಪರಮಾತ್ಮನೇ ಜೀವರೂಪದಲ್ಲಿ ಅವಸ್ಥಿತನಾಗಿರುವುದರಿಂದ ಜೀವ ಪರಮೇಶ್ವರರಿಗೆ ಅಭೇದ. (ಅವಸ್ಥಿತೇರಿತಿ ಕಾಶಕೃತ್ಸ್ನಃ ೧-೪-೨೨).

ಬಾದರಾಯಣರು ಈ ಮೂವರ ಅಭಿಪ್ರಾಯಗಳನ್ನೂ ಆ ಅಭಿ ಪ್ರಾಯಗಳಿಗೆ ಆಧಾರವಾದ ಕಾರಣಗಳನ್ನೂ ತಿಳಿಸಿರುತ್ತಾರೆಯೆ ಹೊರತು ಅವುಗಳಲ್ಲಿ ಒಂದನ್ನು ಸಮರ್ಥಿಸಿ ಉಳಿದವುಗಳನ್ನು ನಿರಾಕರಿಸಿಲ್ಲ. ಅವರು ತಮ್ಮ ಕಾಲದಲ್ಲಿ ಪ್ರಚಾರದಲ್ಲಿದ್ದ ವೇದ ವಿರುದ್ಧವಾದ ಸಾಂಖ್ಯ, ವೈಶೇಷಿಕ, ಬೌದ್ಧ, ಜೈನ ತತ್ತ್ವಗಳನ್ನು ಖಂಡಿಸಿರುತ್ತಾರೆಯೇ ಹೊರತು ವೇದವಾಕ್ಯಗಳನ್ನು ಆಧಾರವಾಗಿ

ಉಳ್ಳ ವೇದಾಂತ ಪಕ್ಷಗಳನ್ನು ಖಂಡಿಸಿರುವುದಿಲ್ಲ. ಮೇಲೆ ಹೇಳಿದ ಮೂವರು ವೇದಾಂತಿಗಳೂ ಆಶ್ವಲಾಯನ, ಕಾತ್ಯಾಯನ, ಶ್ರೌತ ಸೂತ್ರಗಳಲ್ಲಿ ಪ್ರಖ್ಯಾತರಾಗಿದ್ದವರು. ಆದ್ದರಿಂದ ಆ ಮೂವರ ಅಭಿಪ್ರಾಯಗಳನ್ನು ಗೌರವಿಸಿರುತ್ತಾರೆ. ಇವರೆಲ್ಲರೂ ತಮ್ಮಂತೆಯೇ ಶ್ರುತಿಯನ್ನೇ ಪರಮಪ್ರಮಾಣವಾಗಿ ಭಾವಿಸಿದವರು. ಇವರಲ್ಲಿ ಯಾರೊಬ್ಬರ ನಿಲುವನ್ನು ತೆಗಳಿದರೂ ಶ್ರುತಿಗೆ ಅಪಚಾರಮಾಡಿದಂತಾಗುತ್ತದೆ. ಇವರೆಲ್ಲರೂ ಬ್ರಹ್ಮವೇ ಪರಮಸತ್ಯವೆಂಬ ಮುಖ್ಯಾಂಶದಲ್ಲಿ ಒಮ್ಮತ ಪಡೆದಿರುತ್ತಾರೆ. ಅದೇ ಎಲ್ಲಕ್ಕಿಂತ ಮುಖ್ಯವಾದ ಬ್ರಹ್ಮಸೂತ್ರದ ಕೇಂದ್ರ ತತ್ತ್ವ, ನಿರಪೇಕ್ಷತತ್ತ್ವ. ಉಳಿದವು ಗೌಣ; ದೇಶಕಾಲ, ಅವಸ್ಥೆಗಳಿಗೆ ಸಾಪೇಕ್ಷವಾದುವು. ಇವುಗಳಲ್ಲಿ ಒಂದೊಂದು ಒಂದೊಂದು ಕಾಲದಲ್ಲಿ ಮೋಕ್ಷಾರ್ಥಿಗಳ ಮನೋಧರ್ಮಕ್ಕೆ ಸಾಪೇಕ್ಷವಾದ ಸತ್ಯಗಳಾಗಿ ತೋರಿಸಿಕೊಳ್ಳುತ್ತವೆ. ವಿಶಾಲವಾದ ಸೃಷ್ಟಿವೈಚಿತ್ರ್ಯದಲ್ಲಿ ಇವೆಲ್ಲವೂ ಕಾಣಿಸಿಕೊಳ್ಳುವುದು ಸ್ವಾಭಾವಿಕ. ಬ್ರಹ್ಮಸೃಷ್ಟಿಯಲ್ಲಿ ವೈವಿಧ್ಯ ಇರುವಂತೆಯೇ ಆ ಸೃಷ್ಟಿಯನ್ನು ದರ್ಶಿಸಿರುವ ಶ್ರುತಿಯೂ ವೈವಿಧ್ಯದಿಂದ ಕೂಡಿದೆ. ಅದು (ಪುರುಷಸೂಕ್ತ ಪ್ರಕಾರ) ಸಾವಿರ ತಲೆಗಳುಳ್ಳ, ಸಾವಿರ ಕಣ್ಣುಳ್ಳ, ಸಾವಿರ ವಿಧವಾದ ನಡಗೆಯುಳ್ಳ ಪುರುಷನು ತೋರಿಸಿದ್ದು. ಕಾಲ ಅನಂತವಾದದ್ದು, ದೇಶ ಅಪಾರವಾದದ್ದು, ಮುಮುಕ್ಷುಗಳು ಅಸಂಖ್ಯಾತ, ಅವೆಲ್ಲವೂ ಏಕವಾದ ಬ್ರಹ್ಮಾಭಿಮುಖವಾಗಿವೆ.

## ೮. ಎರಡನೆಯ ಅಧ್ಯಾಯ

ಬಾದರಾಯಣರ ಕಾಲದಲ್ಲಿ ಪ್ರಚಾರದಲ್ಲಿದ್ದ ವೇದಾಂತೇತರ

ದರ್ಶನಗಳನ್ನು ಎರಡನೆಯ ಅಧ್ಯಾಯ ಖಂಡಿಸುತ್ತದೆ. ಅವುಗಳಲ್ಲಿ ಪ್ರಬಲವಾಗಿದ್ದದ್ದು ಸಾಂಖ್ಯದರ್ಶನವಾದ್ದರಿಂದ ಅದಕ್ಕೆ ಹೆಚ್ಚು ಭಾಗವನ್ನು ಮೀಸಲಾಗಿಟ್ಟಿದೆ. ಪ್ರಬಲವಾದ ಈ ದರ್ಶನ ಬಿದ್ದು ಹೋದರೆ ಚಿಲ್ಲರೆ ದರ್ಶನಗಳು ಬಿದ್ದುಹೋದಂತಯೇ. ಆದ್ದರಿಂದ ಉಳಿದವನ್ನು ಅಂದರೆ, ವೈಶೇಷಿಕ, ಬೌದ್ಧ, ಜೈನ, ಪಾಶುಪತ ಮತ್ತು ಭಾಗವತ ಪಕ್ಷಗಳನ್ನೂ ಸಂಗ್ರಹವಾಗಿ ವಿಚಾರಮಾಡಿದೆ. ಹಿಂದಿನ ಅಧ್ಯಾಯದಲ್ಲಿ ಸೃಷ್ಟಿಗೆ ಕಾರಣನಾದ ಬ್ರಹ್ಮಕ್ಕೆ ಹೆಚ್ಚು ಗಮನ ಕೊಟ್ಟಿದೆ. ಇಲ್ಲಿ ಸೃಷ್ಟಿಗೆ ಹೆಚ್ಚು ಗಮನ ಕೊಟ್ಟಿದೆ. ಎರಡನೆಯ ಅಧ್ಯಾಯದ ಮೂರನೆಯ ಪಾದ ಜೀವನು ನಿತ್ಯನೆಂದೂ ಹುಟ್ಟಿಲ್ಲದವನೆಂದೂ ಸ್ಥಿರಪಡಿಸುತ್ತದೆ.

ಈ ಅಧ್ಯಾಯದಲ್ಲಿ ಮೂಲಭೂತವಾದ ತತ್ತ್ವ ಕಾರ್ಯಕಾರಣ ತತ್ತ್ವ. ಜಗತ್ತಿಗೆ ಬ್ರಹ್ಮವು ಉಪಾದಾನ ಕಾರಣ ಮತ್ತು ನಿಮಿತ್ತ ಕಾರಣವೆಂಬುದು ಬಾದರಾಯಣರ ಸಿದ್ಧಾಂತ. ಕಾರ್ಯಕಾರಣ ಸಂಬಂಧ ವಿಚಾರವಾಗಿ ಎರಡು ಮುಖ್ಯ ವಾದಗಳಿವೆ-ಸತ್ಕಾರ್ಯವಾದ ಮತ್ತು ಅಸತ್ಕಾರ್ಯವಾದ (ಅಥವಾ ಆರಂಭವಾದ). ಕಾರ್ಯವು ಕಾರಣದಲ್ಲಿದೆ ಎಂಬುದು ಸತ್ಕಾರ್ಯವಾದ; ಕಾರ್ಯ ಕಾರಣದಲ್ಲಿ ಲ್ಲದೆ ಹೊಸದಾಗಿ ಹುಟ್ಟುತ್ತದೆ ಎಂಬುದು ಅಸತ್ಕಾರ್ಯವಾದ. ಮೊದಲನೆಯದು ಸಾಂಖ್ಯವಾದ, ಎರಡನೆಯದು ವೈಶೇಷಿಕರ ವಾದ. ವೇದಾಂತ ಸೂತ್ರಗಳು ಸಾಂಖ್ಯರ ವಾದವನ್ನೂ ವೈಶೇಷಿಕರ ವಾದವನ್ನೂ ಭಾಗಶಃ ನಿರಾಕರಿಸುತ್ತದೆ. ಸಾಂಖ್ಯರ ವಾದ ಉಪಾದಾನ ಕಾರಣಕ್ಕೆ ಹೊಂದಿಕೆಯಾಗುತ್ತದೆ. ಆದರೆ ನಿಮಿತ್ತ ಕಾರಣಕ್ಕೆ ಹೊಂದಿಕೆಯಾಗುವುದಿಲ್ಲ. ವೈಶೇಷಿಕರ ವಾದ ಉಪಾದಾನಕಾರಣಕ್ಕೆ ಹೊಂದಿಕೆಯಾಗುವುದಿಲ್ಲ. ಆದರೆ ನಿಮಿತ್ತ ಕಾರ

ಣಕ್ಕೆ ಹೊಂದಿಕೆಯಾಗುತ್ತದೆ. ವೇದಾಂತ ಸೂತ್ರಗಳು ಬ್ರಹ್ಮ ವನ್ನು ಜಗತ್ತಿಗೆ ಉಪಾದಾನ ಕಾರಣ ಮತ್ತು ನಿಮಿತ್ತ ಕಾರಣ ಎಂದು ೧-೪-೨೩-೭ನೆಯ ಸೂತ್ರಗಳಲ್ಲಿ ತಿಳಿಸಿವೆ. ಆದ್ದರಿಂದ ಬಾದರಾಯಣರು ಇವೆರಡರಲ್ಲಿರುವ ಸಾರಭಾಗವನ್ನು ಮಾತ್ರ ಒಪ್ಪಿ ಉಳಿದದ್ದನ್ನು ತಿರಸ್ಕರಿಸಿರುತ್ತಾರೆ. ಅದಕ್ಕಿಂತ ಮುಂದೆ ಹೋಗಿ ಈ ಎರಡು ವಾದಗಳೂ ಹೇಳದ, ಶ್ರುತಿಮಾತ್ರ ತಿಳಿಸುವ ಬ್ರಹ್ಮ ವೈಚಿತ್ರ್ಯವನ್ನೂ, ಅಸದೃಶ ಪ್ರಭಾವವನ್ನೂ, ಲೀಲೆಯನ್ನೂ ವಿಚಾರಸಾಧನವಾಗಿ ಉಪಯೋಗಿಸಿಕೊಂಡಿರುತ್ತಾರೆ.

ಮೊಟ್ಟ ಮೊದಲು ಎರಡನೆ ಅಧ್ಯಾಯದ ಸೂತ್ರಗಳು ಸ್ಥಾಪಿಸುವ ಸಿದ್ಧಾಂತ ಬ್ರಹ್ಮದ ಕಾರ್ಯವಾದ ಜಗತ್ತು ಬ್ರಹ್ಮಕ್ಕಿಂತ ಬೇರೆ ಅಲ್ಲ (೨-೧-೨೦), ಕಾರಣವಾದ ಪರಬ್ರಹ್ಮವೂ ಕಾರ್ಯವಾದ ಜಗತ್ತೂ ಅಭಿನ್ನ (೨-೧-೧೪) ಎಂಬುದು. ಇದಕ್ಕೆ ಸಾಂಖ್ಯದ ಆಕ್ಷೇಪ ಇದು: ಜಗತ್ತು ಜಡ, ಬ್ರಹ್ಮ ಚೇತನ ರೂಪ. ಅಚೇತನವಾದ ಪ್ರಕೃತಿಗೆ ಚೇತನವಾದ ಬ್ರಹ್ಮಕಾರಣವಲ್ಲವೆಂದು ಹೇಳಬೇಕಾಗುತ್ತದೆ ಎಂಬ ಪೂರ್ವಪಕ್ಷಕ್ಕೆ ಬಾದರಾಯಣರು ಕೊಡುವ ಉತ್ತರ ಇದು. ಇದು ಶ್ರುತಿಯಲ್ಲಿ ಕಂಡುಬರುತ್ತದೆ. ತೈತ್ತಿರೀಯ ಉಪನಿಷತ್ತು ೨-೬ ರಲ್ಲಿ ಅದನ್ನು ವಿಜ್ಞಾನವೂ ಅವಿಜ್ಞಾನವೂ ಎಂದು ಹೇಳಿ ಚೇತನವಾದ ಬ್ರಹ್ಮ ಅಚೇತನವಾದುದಕ್ಕೆ ಕಾರಣವಾಗಬಹುದೆಂದು ಸ್ಪಷ್ಟಪಡಿಸಿದೆ. ಬ್ರಹ್ಮವು ಭೂತಗಳನ್ನು ಸೃಷ್ಟಿಸಿ ಅವುಗಳಲ್ಲಿ ಪ್ರವೇಶಿಸುತ್ತದೆ. ಹೀಗೆ ಭೂತಗಳಲ್ಲಿ ಪ್ರವೇಶಿಸಿರುವ ಬ್ರಹ್ಮವೇ ಇತರ ಎಲ್ಲದ ಉತ್ಪತ್ತಿಗೂ ಕಾರಣ (೨-೩-೧೩). ಕಾರ್ಯವಾದ ಜಗತ್ತು ಕಾರಣವಾದ ಬ್ರಹ್ಮವೂ ಅನನ್ಯ. ಕಾರಣ

ವನ್ನು ಬಿಟ್ಟು ಕಾರ್ಯವಿಲ್ಲ ಎಂಬುದನ್ನು ಎರಡು ದೃಷ್ಟಾಂತರ ಗಳಿಂದ ವಿಶದಪಡಿಸಿದೆ. ೧. ಬಟ್ಟೆ ಮಡಿಸಿಟ್ಟಿದ್ದಾಗ ಅದು ಅವ್ಯಕ್ತ ವಾಗಿರುತ್ತದೆ, ಬಿಚ್ಚಿದಾಗ ಅದರ ಉದ್ದ ಅಗಲಗಳು ವ್ಯಕ್ತವಾಗು ತ್ತವೆ. ಅಂತೆಯೇ ಉತ್ಪತ್ತಿಗೆ ಮೊದಲು ಬ್ರಹ್ಮದಲ್ಲಿ ಅವ್ಯಕ್ತವಾಗಿ ದ್ದದ್ದು ಸೃಷ್ಟಿಯಲ್ಲಿ ವ್ಯಕ್ತವಾಗುತ್ತದೆ. ಮಡಿಸಿದ ಬಟ್ಟೆಯೂ ಬಿಚ್ಚಿದ ಬಟ್ಟೆಯೂ ಒಂದೇ ಆದರೂ ಅವುಗಳ ಗುಣ ಬೇರೆ (೨-೧-೧೬). ೨. ಉಸಿರನ್ನು ಶ್ವಾಸಕೋಶದಲ್ಲಿ ಎಳೆದುಕೊಂಡು ಹಿಡಿದಿಟ್ಟಾಗ ಜೀವ ಮಾತ್ರ ಇರುತ್ತದೆ. ಆದರೆ ಅಂಗಾಂಗಗಳನ್ನು ಚಲಿಸಲಾಗುವುದಿಲ್ಲ. ಹಿಡಿದಿಟ್ಟ ಉಸಿರನ್ನು ಹೊರಕ್ಕೆ ಬಿಟ್ಟಮೇಲೆ ಅಂಗಾಂಗಳನ್ನು ಚಲಿಸಬಹುದು. ಎರಡು ಸಂದರ್ಭಗಳಲ್ಲೂ ಪ್ರಾಣ ವಾಯು ಒಂದೇ. ಆದರೂ ಅದು ಭಿನ್ನ ಕ್ರಿಯೆಗಳನ್ನು ಏರ್ಪಡಿಸು ತ್ತದೆ. ಕಾರಣವಾದ ಮಣ್ಣು ಕಾರ್ಯವಾದ ಗಡಿಗೆಯೂ ಅನನ್ಯವಾದಂತೆ ಕಾರಣವಾದ ಬ್ರಹ್ಮವೂ ಕಾರ್ಯವಾದ ವಿಶ್ವವೂ ಅನನ್ಯ. (೧-೧-೪, ೨೨). ಬೀಜದಲ್ಲಿ ಅವ್ಯಕ್ತವಾ ಗಿದ್ದದ್ದೇ ಮರವಾಗುವುದು. ಅಂತೆಯೇ ಅವ್ಯಕ್ತವಾಗಿ ಬ್ರಹ್ಮ ದಲ್ಲಿದ್ದದ್ದೇ ಸೃಷ್ಟಿಯಾಗಿ ವ್ಯಕ್ತಗೊಳ್ಳುವುದು. ಸಾಂಖ್ಯದಲ್ಲಿರು ವಂತೆ ಸೃಷ್ಟಿಗೆ ಪ್ರಕೃತಿಯೆಂಬ ಉಪಾದಾನ ಕಾರಣ ಮಾತ್ರ ಸಾಲದು, ನಿಮಿತ್ತ ಕಾರಣವೂ ಅಗತ್ಯ. ಬ್ರಹ್ಮವು ಸೃಷ್ಟಿಗೆ ಉಪಾದಾನ ಮತ್ತು ನಿಮಿತ್ತಕಾರಣ. ಮಡಕೆಯನ್ನು ಮಾಡಲು ಚಕ್ರ, ಕೋಲು ಮುಂತಾದ ಕರಣಗಳು ಕುಂಬಾರನಿಗೆ ಅಗತ್ಯ ವಾಗಿರುವಂತೆ ಬ್ರಹ್ಮನು ಸೃಷ್ಟಿಗೆ ನಿಮಿತ್ತ ಕಾರಣವಾಗಲು ಕರಣಗಳು ಬೇಕಿಲ್ಲ. ಏಕೆಂದರೆ ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೇಳಿ ರುವಂತೆ ಅವನು ಕಾಲುಗಳಿಲ್ಲದೆ ವೇಗವಾಗಿ ಸಂಚರಿಸಬಲ್ಲನು

(೩-೧೯). ಹಾಲಿನಂತೆ ಪರಿಣಾಮ ಹೊಂದಲು ಶಕ್ತನಾಗಿದ್ದಾನೆ (ಸೂ.ವಿ. ೧-೨೦-೨೩). ಬ್ರಹ್ಮನು ಯಾವುದೊಂದು ಉಪಯೋಗ ದೃಷ್ಟಿಯಿಂದಲೂ ವಿಶ್ವವನ್ನು ಸೃಷ್ಟಿಸುವುದಿಲ್ಲ. ಅವನು ನಿತ್ಯತೃಪ್ತ ನಾದುರಿಂದ ಯಾವ ಪ್ರಯೋಜನವನ್ನೂ ಬಯಸುವುದಿಲ್ಲ. ಅವನಿಗೆ ಪಕ್ಷಪಾತವಾಗಲಿ ದ್ವೇಷವಾಗಲಿ ಇಲ್ಲ, ಅವನಿಗೆ ಕ್ರೌರ್ಯವಾಗಲಿ ವೈಷಮ್ಯವಾಗಲಿ ಇಲ್ಲ (೨-೧-೩೪). ಜೀವಿಗಳ ಪಾಪ ಪುಣ್ಯಗಳು ಅವರ ಕರ್ಮಾನುಸಾರ. ಪ್ರಪಂಚ ಸೃಷ್ಟಿ ಉದ್ದೇಶರಹಿತವಾದ ತಾನೇ ತಾನಾಗಿ ಪ್ರಕಾಶವಾಗುವ ಲೀಲೆಯ ಹಾಗೆ(೨-೧-೩೪). ಅದು ಅನಂದಸ್ವರೂಪವಾದದ್ದು. ಎಲ್ಲವೂ ಆನಂದದಿಂದ ಹುಟ್ಟುತ್ತವೆ, ಆನಂದದಿಂದ ಬೆಳೆಯುತ್ತವೆ, ಆನಂದವನ್ನು ಸೇರುತ್ತವೆ. ಆ ಆನಂದ ಸ್ವರೂಪವನ್ನು ಮರೆತ ಜೀವಿಗಳು ಪಾಪಯೋನಿಗಳಾಗುತ್ತಾರೆ; ಅದನ್ನು ಅರಿತು ಮುಕ್ತರಾಗುತ್ತಾರೆ. ಆನಂದವೇ ಪರಮ ಗುರಿ. ಈ ಸಕಲವೂ ಆನಂದದಲ್ಲಿ ಭಾಗಿಯಾಗುವುದೇ ಸೃಷ್ಟಿಯ ಅಂತಿಮ ಗುರಿ. ಈ ದೃಷ್ಟಿಯಿಂದ ಬ್ರಹ್ಮವು ಉಪಾದಾನ ನಿಮಿತ್ತ ಕಾರಣವಲ್ಲದೆ ಅಂತಿಮ ಕಾರಣವೂ ಆಗಿದೆ. ಈ ಅಂತಿಮ ಕಾರಣವನ್ನು ಸೂತ್ರಗಳಲ್ಲಿ ಹೇಳಿಲ್ಲ. ಅದು 'ತನ್ನಿಷ್ಠಸ್ಯಮೋಕ್ಷೋ-ಪದೇಶಾತ್' ಎಂಬ(೧-೧-೭) ನೆಯ ಸೂತ್ರದಲ್ಲಿ ಸೂಚ್ಯವಾಗಿದೆ. ಸಾಂಖ್ಯದಲ್ಲಿ ಪ್ರಧಾನ ಅಚೇತನವಾದ್ದರಿಂದ ಅಂತಿಮಗತಿಗೆ ಕಾರಣವಾಗಲಾರದು, ಅಂಥ ಕಾರಣವಾಗಬಲ್ಲದ್ದು ಪರಮಾತ್ಮನೇ. ಛಾಂದೋಗ್ಯ ಉಪನಿಷತ್ತು 'ಶ್ವೇತಕೇತು, ಅದು ಆತ್ಮನು, ಅದು ನೀನಾಗಿರುವೆ' ಎಂದು ಆತ್ಮವನ್ನು ಉಪದೇಶಿಸುತ್ತದೆ.

## ೯. ಮೂರನೆಯ ಅಧ್ಯಾಯ

ಮೂರನೆಯ ಅಧ್ಯಾಯ ಬ್ರಹ್ಮವಿದ್ಯೆಗೆ ಸಾಧನ ತಿಳಿಸುತ್ತದೆ.

ಉಪಾಸನಾರೂಪವಾದ ಜ್ಞಾನದಿಂದ ಜೀವನಿಗೆ ಮೋಕ್ಷ ಸಿದ್ಧಿಸುತ್ತದೆ (೩–೮–೮). ಜೀವನು ಕರ್ತಾ (೨–೩೩–೩೯). ಅವನು ನಿತ್ಯ (೨-೩–೧೬). ಅವನು ಅಣುರೂಪನು. ಬ್ರಹ್ಮವೇ ಜೀವರೂಪ ತಾಳಿದರೂ ಅದು ಜೀವಿಯ ಉಪಾಧಿಗಳಿಂದ ಭಾಧಿತವಾಗುವುದಿಲ್ಲ (೧–೨–೮). ಬಾದರಾಯಣರು ಬ್ರಹ್ಮ, ಜೀವರ ಸಂಬಂಧವನ್ನು ಸೂರ್ಯ ಮತ್ತು ಅವನ ರಶ್ಮಿಗೆ ಹೋಲಿಸಿರುತ್ತಾರೆ. ಸೂರ್ಯನು ಮೋಡದಿಂದ ಕವಿದಾಗ ಸೂರ್ಯನಿಗೆ ಭಾಧೆ ಇಲ್ಲ. ಹಾಗೆಯೇ ಬ್ರಹ್ಮನೂ ಜೀವಿಗಳ ಉಪಾಧಿಗಳಿಂದ ಬಾಧಿತನಲ್ಲ(೨-೩-೪೬). ಜೀವನು ಭೋಕ್ತೃ, ಪಾಪಪುಣ್ಯವನ್ನು ಗಳಿಸುತ್ತಾನೆ ; ಸುಖ ದುಃಖಗಳನ್ನು ಅನುಭವಿಸುತ್ತಾನೆ. ಪರಮಾತ್ಮನು ಸುಖದುಃಖ ರಹಿತ (೧-೧–೧೭). ಜೀವನು ಬ್ರಹ್ಮದ ಅಂಶವೋ ಅಥವಾ ಬಿಂಬವೊ (ಆಭಾಸವೊ) ಎಂಬುದನ್ನು ೨–೨-೪೩ ಮತ್ತು ಮುಂದಿನ ಸೂತ್ರಗಳು ಸ್ಪಷ್ಟಪಡಿಸುವುದಿಲ್ಲ.

ಮೂರನೆಯ ಅಧ್ಯಾಯದಲ್ಲಿ ಸಾಧಕನು ಬ್ರಹ್ಮಜ್ಞಾನವನ್ನು ಪಡೆಯಲು ಅಗತ್ಯವಾದ ಸಾಧನಗಳನ್ನು ಉಪನಿಷತ್ತುಗಳಲ್ಲಿ ಸತ್ತ್ವಶುದ್ಧಿಗೆ ಹೇಳಿರುವ ನಿಯಮಗಳನ್ನು ೨-೩–೪೦–೪೨ರಲ್ಲಿ ತಿಳಿಸಿದೆ. ಮೂರುವರ್ಣದವರಿಗೆ ಮಾತ್ರ ಯಜ್ಞಕರ್ಮಾಧಿಕಾರವುಂಟು. ಆದರೂ ಶೂದ್ರರೂ ಸ್ತ್ರೀಯರೂ ಪರಮೇಶ್ವರನ ಪ್ರಸಾದದಿಂದ ಮುಕ್ತಿಯನ್ನು ಪಡೆಯಬಹುದೆಂದು ಹೇಳಿದೆ (೩-೪-೩೨–೩೫). ಅಜ್ಞಾನದಿಂದ ಮಾಡಿದ ಕರ್ಮ ಜ್ಞಾನಕ್ಕೆ ಬಾಧಕ. ಆದರೆ ಸತ್ಕರ್ಮ ಬಾಧಕವಲ್ಲ (೩–೩–೨೬). ಜ್ಞಾನಿಗೂ ಸಂನ್ಯಾಸಿಗೂ ಕರ್ಮ ಅಗತ್ಯವೆಂದು ೩–೪–೯ ಹೇಳುತ್ತದೆ. ೩–೪-೩೨-೩೫ ಕರ್ಮಜ್ಞಾನ ಸಮುಚ್ಚಯವನ್ನು ಉಪದೇಶಿಸುತ್ತವೆ.

ಮೋಕ್ಷಸ್ಥಿತಿ ಜೀವ ಬ್ರಹ್ಮೈಕ್ಯವೋ ಅಥವಾ ಸಾರೂಪ್ಯವೋ ಎಂಬುದನ್ನು ಬಾದರಾಯಣರು ಸ್ಪಷ್ಟಪಡಿಸಿಲ್ಲ. ಅವರು ಜೀವವಿದ್ದ ಕಾಲದಲ್ಲೇ ಮುಕ್ತಿ ಸಾಧ್ಯವೆಂದು ಹೇಳಿ ಜೀವನ್ಮುಕ್ತಿಯನ್ನು ಒಪ್ಪಿರುತ್ತಾರೆ. ಬ್ರಹ್ಮಜ್ಞಾನ ಜೀವನ ಪ್ರಾರಬ್ಧಕರ್ಮವನ್ನು ಸುಟ್ಟುಬಿಡುತ್ತದೆ. ಆದರೆ ದೇಹವಿರುವವರೆಗೆ ಅದರಿಂದ ಹುಟ್ಟಿದ ಕರ್ಮ ಇದ್ದೇ ಇರುತ್ತದೆ. ಆದರೆ ಜ್ಞಾನಿಯನ್ನು ಅದು ಬಾಧಿಸುವುದಿಲ್ಲ (iv i ೧೩-೧೫).

## ೧೦. ನಾಲ್ಕನೆಯ ಅಧ್ಯಾಯ

ನಾಲ್ಕನೆಯ ಅಧ್ಯಾಯದಲ್ಲಿ ಜೀವನು ಬ್ರಹ್ಮಜ್ಞಾನದಿಂದ ದೇವಯಾನದ ಮೂಲಕ ಬ್ರಹ್ಮವನ್ನು ಸೇರುತ್ತಾನೆ ಎಂಬುದನ್ನು ತಿಳಿಸುತ್ತದೆ. ದೇವಯಾನದಿಂದ ಬ್ರಹ್ಮವನ್ನು ಸೇರಿದ ಜೀವಿಗೆ ಪುನರ್ಜನ್ಮವಿಲ್ಲ. ಜೀವನು ಬ್ರಹ್ಮವನ್ನು ಸೇರಿದಾಗ ಅವನ ಸ್ವರೂಪ ವ್ಯಕ್ತವಾಗುತ್ತದೆ (೪-೪-೧). ೪-೪-೫ ರಿಂದ ೭ರ ವರೆಗಿನ ಸೂತ್ರಗಳು ಮುಕ್ತ ಜೀವಿಯ ಲಕ್ಷಣಗಳನ್ನು ವಿಚಾರಮಾಡುತ್ತವೆ. ಔಡುಲೋಮಿಯ ಪ್ರಕಾರ ಮುಕ್ತಾತ್ಮ ಸ್ವರೂಪ ಕೇವಲ ಚಿತ್‌ಸ್ವರೂಪ. ಮುಕ್ತಾತ್ಮ ಬ್ರಾಹ್ಮರೂಪದಿಂದ ಕಾಣಿಸಿಕೊಳ್ಳುತ್ತಾನೆಂದು ಹೇಳುತ್ತಾನೆ. ಬ್ರಾಹ್ಮ ಎಂದರೆ ಐಶ್ವರ್ಯ. ಸಕಲ ಗುಣಸಂಪತ್ತು, ಸತ್ಯಕಾಮ, ಸತ್ಯಸಂಕಲ್ಪ, ಸರ್ವಜ್ಞತ್ವ, ಸರ್ವೇಶ್ವರತ್ವ ಆ ಐಶ್ವರ್ಯದಲ್ಲಿ ಸೇರಿವೆ. 'ಅಲ್ಲಿ ಮುಕ್ತನು ನಗುತ್ತ ಕ್ರೀಡಿಸುತ್ತ, ಇರುತ್ತಾನೆ. ಅವನು ಚೇತನಸ್ವರೂಪದಲ್ಲೂ, ಬ್ರಾಹ್ಮಸ್ವರೂಪದಲ್ಲೂ ಎರಡು ಸ್ವರೂಪಗಳಲ್ಲೂ ಇರುತ್ತಾನೆ. ಅವನು

ಇಂಥ ಉನ್ನತ ಗುಣಗಳನ್ನು ಪಡೆದಿದ್ದರೂ ಅವನು ಬ್ರಹ್ಮದಂತೆ ಸೃಷ್ಟಿಶಕ್ತಿ ಪಡೆದಿರುವುದಿಲ್ಲ (೪–೪–೧೭). ಮುಕ್ತನು ಪರಮಾತ್ಮನಿಗಿಂತ ಬೇರೆಯಾಗದೆ (ಅವಿಭಾಗೇನ) ಇರುತ್ತಾನೆ. ಏಕೆಂದರೆ ಅದು ಶ್ರುತಿಯಲ್ಲಿ ಕಂಡುಬರುತ್ತದೆ. (೪–೪–೪) 'ನಾನು ಬ್ರಹ್ಮನಾಗಿರುವೆ' (ಬೃ. ಉ. ೧-೪-೧೦) 'ಎಲ್ಲಿ ಬೇರೆಯದನ್ನು ನೋಡುವುದಿಲ್ಲವೋ'ಅದು ಬ್ರಹ್ಮ (ಛಾ.ಉ.೧–೪–೧೦), 'ಶುದ್ಧವಾದ ನೀರಿನಲ್ಲಿ ಸೇರಿದ ನೀರು ಶುದ್ಧವಾದ ನೀರೇ ಆಗುವುದು. ಈ ವಾಕ್ಯಗಳನ್ನು ತಿಳಿದುಕೊಂಡಿರುವ ಮುನಿ ಆತ್ಮನಾಗುವನು (ಕ. ಉ. ೨-೪–೧೫).

## ೧೧. ಕೊನೆಯ ಮಾತು

ಎಲ್ಲವೂ ಬ್ರಹ್ಮದಿಂದ ಬಂದು, ಬ್ರಹ್ಮದಿಂದ ಬೆಳದು, ಬ್ರಹ್ಮವನ್ನು ಅವಿಭಾಗವಾಗಿ ಸೇರುವುದೇ ಎಲ್ಲದರ ಆದಿ ಮತ್ತು ಅಂತ್ಯ ಎಂಬ ತತ್ತ್ವವೇ ಬ್ರಹ್ಮಸೂತ್ರಗಳ ಉದ್ದಕ್ಕೂ ಹಾಸುಹೊಕ್ಕಾಗಿರುವ ತತ್ತ್ವವೆಂಬುದರಲ್ಲಿ ಸಂಶಯಕ್ಕೆ ಅವಕಾಶವಿಲ್ಲ. ಆದ್ದರಿಂದ ಇದರ ತತ್ತ್ವ ಏಕತ್ವವೇ ; ಅದು ಚಿರಂಜೀವಿ ತತ್ತ್ವ. ಇದು 'ಏಕಂ ಸತ್' ಎಂದು ಋಗ್ವೇದದ ದೀರ್ಘತಮಸ್ ಋಷಿಯ ಸೂಕ್ತದಿಂದ ಪ್ರಾರಂಭವಾಗಿ ಇಂದಿನವರೆಗೆ ಬಹುಮುಖವಾಗಿ ಬೆಳೆದಿದೆ. ಇದು ಬಹುಮುಖವಾದ ತತ್ತ್ವ. ಉಪನಿಷತ್ತುಗಳಲ್ಲಿ ಇದರ ಅನೇಕ ಮುಖಗಳು ಪ್ರಕಾಶವಾಗಿವೆ. ಅಂದಿನಿಂದ ಇಂದಿನವರೆಗೆ ಹಿಡಿದು ಆಶ್ಮರಥ್ಯ, ಔಡುಲೋಮಿ, ಕಾಶಕೃತ್ಸ್ನರ ಮೂಲಕವೂ ಅದು ಬಹು ಪ್ರಕಾರವಾಗಿ ಬೆಳೆದಿದೆ. ಭರ್ತೃಪ್ರಪಂಚ ಮುಂತಾದವರೂ, ಶಂಕರಾಚಾರ್ಯರೂ, ಭಾಸ್ಕರಾಚಾರ್ಯರೂ,

(ಕ್ರಿ. ಶ. ೧೦೦೦) ಯಾದವ ಪ್ರಕಾಶರೂ (ಕ್ರಿ. ಶ. ೧೧೪೦) ರಾಮಾನುಜರೂ (ಕಿ. ಶ. ೧೧೪೦), ಮಧ್ವಾಚಾರ್ಯರೂ (ಕಿ.ಶ. ೧೨೩೮) ಶ್ರೀಕಂಠ (ಕ್ರಿ. ಶ. ೧೨೭೦) ಶ್ರೀಪತಿ (ಕ್ರಿ. ಶ. ೧೪೦೦), ವಲ್ಲಭ (ಕ್ರಿ. ಶ. ೧೪೭೯) ಶುಕ (ಕ್ರಿ. ಶ. ೧೫೫೦), ವಿಜ್ಞಾನ ಭಿಕ್ಷು (ಕ್ರಿ. ಶ. ೧೬೦೦), ಬಲದೇವ (ಕ್ರಿ. ಶ. ೧೭೨೫) ಬ್ರಹ್ಮಸೂತ್ರಗಳ ಮೇಲೆ ಭಾಷ್ಯ ಬರೆದಿರುತ್ತಾರೆ. ಬಾದರಾಯಣರು ಉಪನಿಷತ್ತುಗಳು ಹೇಳಿರುವುದನ್ನು ಬಿಟ್ಟು ಸ್ವಲ್ಪವೂ ಕದಲಲಿಲ್ಲ. ಅವರದು ಉಪನಷತ್ತುಗಳ ಭಾಷ್ಯವಲ್ಲ; ಸಾರಸಂಗ್ರಹ. ಉಳಿದ ವರದು ಭಾಷ್ಯ. ಭಾಷ್ಯಕಾರರದು ಸ್ವತಂತ್ರ ವಿಚಾರ. ಅದರಲ್ಲಿ ವೈಯಕ್ತಿಕ ಅಂಶವಿದೆ. ಬ್ರಹ್ಮವೇ ಪರಮ ಎಂಬ ಅವರ ಒಂದು ಮೂಲತತ್ತ್ವವನ್ನು ಬಿಡದೆ ಆ ಮೂಲತತ್ತ್ವವನ್ನು ಅನೇಕ ಬಗೆ ಯಾಗಿ ತಮ್ಮ ವೈಯಕ್ತಿಕ ದೃಷ್ಟಿಕೋನಕ್ಕೆ ಸಂಗತವಾಗಿ ತೋರಿ ದಂತೆ ಕಾಲ ದೇಶ ವ್ಯತ್ಯಾಸಗಳಿಗೆ ಸಂಬಂಧಿಸಿದಂತೆ ಬೆಳೆಸಿರತ್ತಾರೆ. ಬ್ರಹ್ಮ ವಿಶ್ವಕ್ಕೆ ಉಪಾದಾನ ಕಾರಣವೆಂಬ ಉಪನಿಷತ್ತುಗಳ ತತ್ತ್ವವನ್ನು ಬಿಟ್ಟು ಬಹುದೂರ ಸಾಗಿದೆ ಎಂದು ಭಾವಿಸಿರುವ ಮಾಧ್ವ ದ್ವೈತ ತತ್ತ್ವವೂ ಕೂಡ ಬ್ರಹ್ಮವೊಂದೇ ಪರಮ ಎಂಬ ಉಪನಿಷತ್ತುಗಳ ತತ್ತ್ವವನ್ನು ಬಿಟ್ಟು ಬೆಳಸಿದ ತತ್ತ್ವವಲ್ಲ.

---

## ತಿದ್ದುಪಡಿ

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೭ | ೧೨ | ತೈತ್ತಿೀರೀಯದವು | ತೈತ್ತಿರೀಯದವು |
| ೧೧ | ೧೦ | ಮಥಸ್ತಿಕೆ | ಮಧ್ಯಸ್ತಿಕೆ |
| ೧೬ | ೧ | ಅಂತರ್ಸಾಮಿ | ಅಂತರ್ಯಾಮಿ |
| ೧೭ | ೧೪ | ಆಣು | ಅಣು |
| ೧೭ | ೧೮ | ಸಿಧಿಧ್ಯಾಸಸ | ನಿದಿಧ್ಯಾಸನ |
| ೧೮ | ೭ | ಆತ್ಮರಥ್ಯ | ಆಶ್ಮರಥ್ಯ |
| ೨೨ | ೧೯ | ಆಚೇತನ | ಅಚೇತನ |
| ೨೮ | ೧೪ | ಬೆಳಸಿರತ್ತಾರೆ | ಬೆಳೆಸಿರುತ್ತಾರೆ |

# ಸಾಹಿತ್ಯವಾಹಿನಿ

## ಭಾರತೀಯ ತತ್ತ್ವಶಾಸ್ತ್ರದ ವಿವರಣಾತ್ಮಕ ಪರಿಚಯ

ಲೇಖಕರು : ಜಿ. ಹನುಮಂತರಾವ್

೪೧. ವೇದ ಸಂಹಿತೆಗಳು ೧
೪೨. ವೇದ ಸಂಹಿತೆಗಳು ೨
೪೩. ವೇದ ಸಂಹಿತೆಗಳು ೩
೪೪. ಬ್ರಾಹ್ಮಣಗಳು, ಆರಣ್ಯಕಗಳು
೪೫. ಉಪನಿಷತ್ತುಗಳ ತತ್ತ್ವ ೧
೪೬. ಉಪನಿಷತ್ತುಗಳ ತತ್ತ್ವ ೨
೪೭. ಉಪನಿಷತ್ತುಗಳ ತತ್ತ್ವ ೩
೪೮. ಕಲ್ಪ ಸೂತ್ರಗಳು ಇತ್ಯಾದಿ
೪೯. ಪಂಚರಾತ್ರ ಆಗಮಗಳು
೫೦. ಪಾಶುಪತ ಆಗಮಗಳು
೫೧. ಭಗವದ್ಗೀತೆ ೧
೫೨. ಭಗವದ್ಗೀತೆ ೨
೫೩. ಭಗವದ್ಗೀತೆ ೩
೫೪. ಚಾರ್ವಾಕ ಇತ್ಯಾದಿ
೫೫. ಹೀನಯಾನ ಬೌದ್ಧ ದರ್ಶನಗಳು
೫೬. ಮಹಾಯಾನ ಬೌದ್ಧ ದರ್ಶನಗಳು
೫೭. ಜೈನದರ್ಶನ
೫೮. ನ್ಯಾಯದರ್ಶನ
೫೯. ವೈಶೇಷಿಕ ದರ್ಶನ
೬೦. ಸಾಂಖ್ಯದರ್ಶನ
೬೧. ಯೋಗದರ್ಶನ
೬೨. ಪೂರ್ವ ಮೀಮಾಂಸಾ
೬೩. ವೇದಾಂತ ಸೂತ್ರಗಳು
೬೪. ಅದ್ವೈತ
೬೫. ವಿಶಿಷ್ಟಾದ್ವೈತ
೬೬. ದ್ವೈತ
೬೭. ಕಾಶ್ಮೀರಶೈವ ದರ್ಶನ
೬೮. ಭಾರತೀಯ ತತ್ತ್ವಶಾಸ್ತ್ರ ಸಮೀಕ್ಷೆ:

ಪ್ರತಿಯೊಂದು ಪುಸ್ತಕದ ಬೆಲೆಯೂ ಐವತ್ತು ಪೈಸೆ

ಡಿ.ವಿ. ಕೆ. ಮೂರ್ತಿ :: ಪ್ರಕಾಶಕರು :: ಮೈಸೂರು-೪